ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ತತ್ವಾದರ್ಶಗಳನ್ನು ಸಾರುವ

# ಪವಿತ್ರ ಸಂದೇಶ

ಕನ್ನಡ ಪಾಕ್ಷಿಕ

ಚಂದಾದರ ವಿವರ

| ದೇಶ | | |
|---|---|---|
| ವಾರ್ಷಿಕ | ₹ | 250-00 |
| ಅರ್ಧ ವಾರ್ಷಿಕ | ₹ | 150-00 |
| ಬಿಡಿ ಪ್ರತಿ | ₹ | 10-00 |
| ಗಲ್ಫ್ ರಾಷ್ಟ್ರಗಳಿಗೆ | | |
| ವಾರ್ಷಿಕ | ₹ | 2,000-00 |
| ಅರ್ಧ ವಾರ್ಷಿಕ | ₹ | 1,000-00 |

❖ ಸಂಪುಟ: 18 ❖ ಸಂಚಿಕೆ: 18 ❖ ಪುಟ: 12 ❖ ಸೆಪ್ಟಂಬರ್ 16-30, 2014 ❖ ಬೆಲೆ: ₹ 10/- http://www.salafimangalore.org

## ಆಕಾಶದಿಂದ ನೀರನ್ನು ಇಳಿಸಿದ್ದು ಯಾರು?

### ವೈಜ್ಞಾನಿಕ ಜಗತ್ತನ್ನು ದಿಗ್ಭ್ರಮೆಗೊಳಿಸಿದ ಕುರ್‌ಆನ್

✍ ಡಾ| ಕು| ಕಮರುನ್ನಿಸಾ ಕೊಣಾಜೆ

ಸಮುದ್ರಗಳಲ್ಲಿ, ನದಿಗಳಲ್ಲಿ, ಬಾವಿಗಳಲ್ಲಿ ಮತ್ತು ಕೆರೆಗಳಲ್ಲಿ ತುಂಬಿರುವ ಭೂಗೋಳದ 70 ಶತಮಾನಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿರುವ ನೀರು ಈ ಗೋಳಕ್ಕೆ ಎಲ್ಲಿಂದ ಹರಿದು ಬಂತು? ಯಾಕಾಗಿ ಇತರ ಗ್ರಹಗಳಲ್ಲಿ ಈ ರೀತಿ ನೀರು ಕಾಣುವುದಿಲ್ಲ? ನಾಲ್ಕು ಬಿಲಿಯನ್ ವರ್ಷಗಳಿಗಿಂತಲೂ ಹೆಚ್ಚು ಕಾಲದಿಂದ ಭೂಗೋಳದ ಜೀವರಕ್ತವಾಗಿ ಈ ನೀರು ಒಂದಿಷ್ಟೂ ಬತ್ತಿ ಹೋಗದೆ ನೆಲೆನಿಲ್ಲಲು ಕಾರಣವೇನು? ಸ್ವಲ್ಪ ಮಾತ್ರವೇ ತಿಳುವಳಿಕೆ ನೀಡಲ್ಪಟ್ಟ ಮಾನವನ ತಲೆ ಬಿಸಿಯೇರುವ ಇಂತಹ ನಿಗೂಢ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ಪ್ರಪಂಚದ ಸೃಷ್ಟಿಕರ್ತನಾದ ಅಲ್ಲಾಹನ ವಚನವಾದ ವಿಶುದ್ಧ ಕುರ್‌ಆನಿಗಿಂತ ಉತ್ತಮವಾದುದು ಇನ್ನೊಂದಿಲ್ಲ.

ಭೂಮಿಯಲ್ಲಿ ಮಾನವನು ವಾಸವಾಗಲಾರಂಭಿಸಿ ಸಹಸ್ರಾರು ವರ್ಷಗಳಾದವು. ಆದಿ ಮಾನವನಿಂದ ಮೊದಲ್ಗೊಂಡು ಮಾನವ ರಾಶಿಯ ಅರಿವು ಮತ್ತು ಅನುಭವಗಳನ್ನು ಒಟ್ಟುಗೂಡಿಸಿದರೂ ಕೋಟಿಗಟ್ಟಲೆ ವರ್ಷಗಳಿಗಿಂತಲೂ ಮುಂಚಿನ ಭೂಮಿಯ ನೀರಿನ ಕುರಿತಾದ ಸ್ಪಷ್ಟವಾದ ಅರಿವು ಸಿಗಲು ಸಾಧ್ಯವಿಲ್ಲ. ಆದ್ದರಿಂದಲೇ ಅದ್ಭುತಗಳ ಅದ್ಭುತವಾದ ಪವಿತ್ರ ಕುರ್‌ಆನ್ ಈ ವಿಷಯದಲ್ಲಿ ಏನು ಹೇಳುತ್ತದೆ ಎಂಬ ಅನ್ವೇಷಣೆ ಇಲ್ಲಿ ಪ್ರಸ್ತುತವಾಗುತ್ತದೆ. ಆಧುನಿಕ ವಿಜ್ಞಾನದ ಸಂಶೋಧನೆಗಿಂತಲೂ ವಿಸ್ಮಯಕರವಾದ ವೈಜ್ಞಾನಿಕ ಸತ್ಯಗಳನ್ನೊಳಗೊಂಡ ಕುರ್‌ಆನ್ ಈ ವಿಷಯದಲ್ಲೂ ಸ್ಪಷ್ಟವಾದ ವಿವರಗಳನ್ನು ನೀಡುತ್ತದೆ.



ಸುಮಾರು ನಾಲ್ಕು ಬಿಲಿಯನ್ ವರ್ಷಗಳಿಗಿಂತ ಮುಂಚೆ ಭೂಮಿಯ ಆವಿರ್ಭಾವ ಕಾಲದಲ್ಲಿ ಭೂಮಿಯ ರೂಪ ಈ ರೀತಿಯಿರಲಿಲ್ಲ. ಅಂದು ಈ ಹಸಿರು ಗ್ರಹದಲ್ಲಿ ನೀರಿರಲಿಲ್ಲ. ಮಾತ್ರವಲ್ಲ, ಅಂದಿನ ಭೂಮಿಯ ಉಷ್ಣತೆ 5000 ಡಿಗ್ರಿ ಸೆಂಟಿಗ್ರೇಡ್ ಆಗಿತ್ತು. ಅದರ ಹೊರತಾಗಿ ಗಂಟೆಗೆ ಸಾವಿರಾರು ಕಿ.ಮೀ.ಗಳಷ್ಟು ವೇಗತೆಯ ಬಿರುಗಾಳಿ ಬೀಸುತ್ತಿತ್ತು. ಬಹಳಷ್ಟು ರಾಸಾಯನಿಕ ವಸ್ತುಗಳು ಆವಿಯ ರೂಪದಲ್ಲಿ ಅಸ್ತಿತ್ವದಲ್ಲಿದ್ದರೂ ನೀರಿಗೆ ದ್ರವರೂಪ ತಾಳಲು ಸರ್ವಥಾ ಸಾಧ್ಯವಾಗಿರಲಿಲ್ಲ. ಬಳಿಕ ಮಿಲಿಯಗಟ್ಟಲೆ ವರ್ಷಗಳ ವರೆಗೆ ಮುಂದುವರಿದ ವರ್ಷಧಾರೆಯಿಂದಾಗಿ ಭೂಮಿಯು ಕ್ರಮೇಣ ತಣ್ಣಗಾಗಿ ಇಂದು ನಾವು ಕಾಣುವ ರೂಪದಲ್ಲಿ ವಾಸಯೋಗ್ಯವಾಯಿತಲ್ಲದೆ, ಅದರ ಮುಕ್ಕಾಲು ಭಾಗಕ್ಕಿಂತ ಹೆಚ್ಚು ಜಲಾವೃತವಾಯಿತು.

ಭೂಮಿಯ ನೀರಿನ ಉಗಮದ ಕುರಿತು ವಿಜ್ಞಾನಿಗಳಿಗೆ ವಿಭಿನ್ನ ಅಭಿಪ್ರಾಯಗಳಿವೆ. ಭೂಜಲದ ಉಗಮವು ಉಲ್ಕೆಗಳೆಂದೂ ಧೂಮಕೇತುಗಳೆಂದೂ ಕಾರ್ಮೋಡಗಳೆಂದೂ ಅಭಿಪ್ರಾಯ ಪಡುತ್ತಾರೆ. ಈ ಮೂರರಲ್ಲಿ ಯಾವುದರ ಮೂಲಕವಾದರೂ ಈ ಜಲವಾಹಿನಿಗಳು ಭೂಮಿಗೆ ಬಿದ್ದೊಡನೆ ಅವುಗಳಲ್ಲಿರುವ ನೀರು ಭೂಮಿಯ ತಾಪ ದಿಂದಾಗಿ ನೀರಾವಿಯಾಗಿ ಮಾರ್ಪಡುತ್ತದೆ.

(2ನೇ ಪುಟಕ್ಕೆ)

## ದೇವನು ಯಾರು?

### ವೇದಗಳು, ಉಪನಿಷತ್ತುಗಳು, ಗೀತೆ, ಬೈಬಲ್ ಮತ್ತು ಕುರ್‌ಆನ್‌ನ ಬೆಳಕಿನಲ್ಲಿ

**ತಮಿದಂ ನಿಗತಂ ಸಃ ಸ ಏಷ ಏಕ ಏಕವೃದೇಕ ಏವ**

**ಅರ್ಥ: ಕೇವಲ ಅವನು ಒಬ್ಬನೇ ತನಗೆ ತಾನಾಗಿ ಏಕೈಕನಾಗಿದ್ದಾನೆ. ಅಥರ್ವಣ ವೇದ 13:4:12**

**ಮಹೋ ದಿವಃ ಪೃಥಿವ್ಯಾಶ್ಚ್ಯಚ್ ಸಾಮ್ರಾಟ್**

**ಅರ್ಥ: ಆ ದೇವನೇ ಭೂಮ್ಯಾಕಾಶಗಳ ಸೃಷ್ಟಿಕರ್ತ. ಋಗ್ವೇದ 1:100:1**




ಗಿರೀಶ್ ಕೆ.ಎಸ್. ಉಡುಪ
ಪೀಸ್‌ಫುಲ್ ಮ್ಯಾನ್‌ಕೈಂಡ್ ಬೆಂಗಳೂರು, ಮೊ.: 9036161319
E-mail : peacefulmankind.com, peacefulmankind.in

ಈ ವಿಶಾಲವಾದ ವಿಶ್ವದಲ್ಲಿ ಕೋಟ್ಯಾನುಕೋಟಿ ಜೀವರಾಶಿಗಳಿವೆ. ಅವುಗಳಲ್ಲಿ ಅತ್ಯುತ್ತಮವಾದ ಜೀವರಾಶಿಯೆಂದರೆ "ಮಾನವ. ದೇವನು ಸರ್ವ ಸೃಷ್ಟಿಗಳನ್ನು ಮಾನವನ ಸೇವೆಗೆಂದೇ ಸೃಷ್ಟಿಸಿರುವನು". ಆದರೆ ಮನುಷ್ಯನನ್ನು ಮಾತ್ರ ದೇವನು "ತನ್ನನ್ನು ಅರಿತು, ಗುರುತಿಸಿ, ಆರಾಧಿಸಲಿಕ್ಕಾಗಿ" ಸೃಷ್ಟಿಸಿದನು.

ಮನುಷ್ಯನಿಗೂ ಇತರ ಜೀವರಾಶಿಗಳಿಗೂ ಪ್ರಧಾನ ವ್ಯತ್ಯಾಸವೆಂದರೆ, ವಿವೇಚನಾ ಜ್ಞಾನ. ದೇವನು ಮನುಷ್ಯನಿಗೆ ಪ್ರತ್ಯೇಕವಾದ ಸ್ಥಾನವನ್ನು ಯಾಕಾಗಿ ಇರಿಸಿದ್ದಾನೆ? ಯಾಕಾಗಿಯೆಂದರೆ: "ಮನುಷ್ಯನು ತನಗೆ ಕೊಡಲ್ಪಟ್ಟ ವಿವೇಚನಾ ಜ್ಞಾನದೊಟ್ಟಿಗೆ, ತನ್ನನ್ನು ಸೃಷ್ಟಿಸಿದ ಸೃಷ್ಟಿಕರ್ತನನ್ನು ಯತಾರ್ಥವಾಗಿ ಗುರುತಿಸಿ, ಅರಿತು ಅವನನ್ನು ಮಾತ್ರವೇ ಆರಾಧಿಸಬೇಕೆಂದಾಗಿದೆ. ದೇವನು ಮನುಷ್ಯನನ್ನು ಸೃಷ್ಟಿಸುವುದಕ್ಕೆ ಇದೇ ಪ್ರಮುಖವಾದ ಕಾರಣವಾಗಿದೆ. ಈ ದೃಷ್ಟಿಯಲ್ಲಿ ಮನುಷ್ಯ ಸಫಲನಾಗುವನೋ ಅಥವಾ ಪರಾಜಿತನಾಗುವನೋ ಎನ್ನುವುದೇ ಪರೀಕ್ಷೆಯಾಗಿದೆ. ಇದರ ಒಂದು ಭಾಗವೇ ಇಹಲೋಕ ಜೀವನ.

ವಾಸ್ತವದಲ್ಲಿ ದೈವ ಭಾವನೆಯನ್ನು ಯತಾರ್ಥವಾಗಿ ಗ್ರಹಿಸಬೇಕೆಂದರೆ, ಸೃಷ್ಟಿಕರ್ತನಿಗೆ ಸಂಬಂಧಿಸಿದ ಪ್ರತ್ಯೇಕವಾದ ಗುಣ-ವಿಶೇಷಗಳನ್ನು, ಸಂಪೂರ್ಣವಾಗಿ ತಿಳಿದುಕೊಳ್ಳಬೇಕು. ಸರಿಯಾದ ರೀತಿಯಲ್ಲಿ ಅರ್ಥ ಮಾಡಿಕೊಳ್ಳಬೇಕು. ಚಿತ್ತಶುದ್ಧಿಯಿಂದ ಅಂಗೀಕರಿಸಬೇಕು. ಈ ವಿಷಯವು ಧಾರ್ಮಿಕ ಗ್ರಂಥಗಳ ಬೋಧನೆಗಳಲ್ಲಿ ಪ್ರಮಾಣಿತವಾಗಿದೆ.

### ದೇವನು ಒಬ್ಬನೆಯೇ?

ದೇವನು ಒಬ್ಬನೇನಾ? ಅಥವಾ ಅನೇಕರೇ? ಎಂದು ಪ್ರಶ್ನಿಸಿದರೆ ದೊರಕುವ ಉತ್ತರವೇನು? (6ನೇ ಪುಟಕ್ಕೆ)



ಸಂಪಾದಕೀಯ

بسم الله الرحمن الرحيم

الحمد لله رب العالمين والصلاة والسلام على نبينا محمد وآله وصحبه أجمعين أما بعد

# ಮಹಿಳೆಯರ ಮಾನ, ಪ್ರಾಣ ಹೀರುವ ಮಂತ್ರವಾದದ ವಿರುದ್ಧ ಕಠಿಣ ಕ್ರಮ ಅಗತ್ಯ

ಫೆಲಸ್ತೀನ್ ಮತ್ತು ಇರಾಕ್‌ನಲ್ಲಿ ನಡೆಯುತ್ತಿರುವ ಘೋರ ಕೊಲೆ ಪಾತಕಗಳ ಜತೆಯಲ್ಲೇ ಕಳೆದ ರಮದಾನಿನಲ್ಲಿ ಕೇರಳದಲ್ಲೊಂದು ದಾರುಣ ಹತ್ಯೆ ನಡೆಯಿತು. ಮನೋರೋಗಿಯಾಗಿದ್ದ ಹಸೀನಾ ಎಂಬ ಯುವತಿಗೆ ಜಿನ್ನ್(ಭೂತ) ಹಿಡಿದಿದೆಯೆಂದು ಹೇಳಿ ಜಿನ್ನ್ ಬಿಡಿಸುವ ನೆಪದಲ್ಲಿ ಅವಳ ಎದೆಗೂ ಬೆನ್ನಿಗೂ ತುಳಿದು ಬೆನ್ನೆಲುಬು ಮುರಿದು ಆಕೆಯನ್ನು ಅಮಾನುಷವಾಗಿ ಕೊಂದು ಹಾಕಿದ ಜಿನ್ನ್ ಚಿಕಿತ್ಸಕ ಮಂತ್ರವಾದಿಯೊಬ್ಬ ಜೈಲಿನಲ್ಲಿ ಕಂಬಿ ಎಣಿಸುತ್ತಿದ್ದಾನೆ. ಮಂತ್ರವಾದವೆಂಬ ಈ ರಾಕ್ಷಸೀಯ ಚಿಕಿತ್ಸೆಗೆ ಮಹಿಳೆಯರು, ಮಕ್ಕಳು ಬಲಿಯಾಗುತ್ತಿರುವ ಬಹಳಷ್ಟು ಪ್ರಕರಣಗಳು ಕೇರಳ, ಕರ್ನಾಟಕಗಳಲ್ಲಿ ಮಾತ್ರವಲ್ಲ, ದೇಶದೆಲ್ಲೆಡೆ ಅವ್ಯಾಹತವಾಗಿ ನಡೆಯುತ್ತಿವೆ.

ಮನೋರೋಗ ತಜ್ಞರ ಬಳಿ ಚಿಕಿತ್ಸೆ ಕೊಡಿಸಬೇಕಾದ ಅಮಾಯಕ ಮಾನಸಿಕ ರೋಗಿಗಳನ್ನು ಮಂತ್ರವಾದಿಗಳೆಂಬ ರಾಕ್ಷಸರ ವಶಕ್ಕೊಪ್ಪಿಸಿ ಜಿನ್ನ್(ಭೂತ) ಬಿಡಿಸುವ ನೆಪದಲ್ಲಿ ಹೊಡೆದು, ತುಳಿದು ಮಾರಕವಾಗಿ ಮರ್ದಿಸುವ ಮಂತ್ರವಾದವೆಂಬ ಅಮಾನುಷ ಚಿಕಿತ್ಸೆಗೆ ಬಲಿಯಾಗಿಸಿ ಮಾನ, ಪ್ರಾಣ ಕಳೆದುಕೊಳ್ಳುತ್ತಿರುವ ಮಹಿಳೆಯರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿವೆ. ಈ ಮಾರಕ ಚಿಕಿತ್ಸೆಗೆ ಬಲಿಯಾಗುತ್ತಿರುವವರಲ್ಲಿ ಮಹಿಳೆಯರೇ ಹೆಚ್ಚು. ಕೌಟುಂಬಿಕ ಸಮಸ್ಯೆಗಳಿಂದ ಮಾನಸಿಕ ಸ್ಥಿಮಿತ ಕಳೆದುಕೊಳ್ಳುತ್ತಿರುವ ಮಹಿಳೆಯರನ್ನು ಸಿಹ್ರ್ ಬಾಧೆ, ಭೂತ ಬಾಧೆಯೆಂದೆಲ್ಲಾ ನಂಬಿಸಿ ಕಟುಕ ಮಂತ್ರವಾದಿಗಳ ಕರಾಳ ಹಸ್ತಕ್ಕೆ ಒಪ್ಪಿಸುವ ಗಂಡಂದಿರು ಮತ್ತು ಅವರ ಮನೆಯವರ ಕೃತ್ಯ ಖಂಡನೀಯವಾಗಿದೆ. ಇಂತಹ ಮಹಿಳೆಯರನ್ನು ಮಂತ್ರವಾದಿಗಳೆಂಬ ಕಟುಕರು ತಮ್ಮ ಕತ್ತಲೆ ಕೋಣೆಯೊಳಗೆ ತುರುಕಿ ಸಿಹ್ರ್ ನಿವಾರಿಸುವ, ಭೂತ ಬಿಡಿಸುವ ನೆಪದಲ್ಲಿ ತಮ್ಮೆಲ್ಲಾ ದಾಹಗಳನ್ನು ತೀರಿಸಿ ಮಾನ ಹರಣ ಮಾತ್ರವಲ್ಲ, ಕೆಲವೊಮ್ಮೆ ಪ್ರಾಣಹರಣ ಗೈದು ಮನೆಯವರಿಗೆ ಹಿಂತಿರುಗಿಸುವ ಬೀಭತ್ಸ ಘಟನೆಗಳು ಮುಲ್ಲಾ, ಮುಸ್ಲಿಯಾರ್, ತಂಙಳ್, ಸ್ವಾಮೀಜಿಗಳ ಮಾಂತ್ರಿಕ ಕುಠೀರಗಳಲ್ಲಿ ನಡೆಯುತ್ತಿವೆ. ಕೆಲವು ಹಂತಕ ಮಂತ್ರವಾದಿಗಳ ಮಾತನ್ನು ನಂಬಿ ಹಸುಗೂಸುಗಳನ್ನೇ ಬಲಿಗೊಡುವ ದಂಪತಿಗಳಿದ್ದಾರೆ. ಆದರೆ ಹೆಚ್ಚಿನ ಪ್ರಕರಣಗಳನ್ನು ಮುಚ್ಚಿ ಹಾಕಲಾಗುತ್ತದೆ.

ಮಂತ್ರವಾದವೆಂಬ ದಂಧೆಯು ಕೋಟ್ಯಾಂತರ ರೂ. ವರಮಾನದ ಅತೀ ದೊಡ್ಡ ಉದ್ಯಮವಾಗಿ ಬೆಳೆದಿದೆ. ಬಹುತೇಕ ಮಂತ್ರವಾದಿಗಳು ಮತ್ತು ಜ್ಯೋತಿಷ್ಯರು ಅಮಾಯಕ ಜನರ ಹಣ, ಮಾನ, ಪ್ರಾಣ ಹೀರಿ ಅಪಾರ ಸಂಪತ್ತಿನ ಒಡೆಯರಾಗಿ ಮೆರೆಯುತ್ತಿದ್ದಾರೆ. ಇಂತಹವರನ್ನು ಪವಾಡ ಪುರುಷರೆಂದೂ ದೇವಮಾನವರೆಂದೂ ಬಿಂಬಿಸಿ ಪೂಜಿಸಲಾಗುತ್ತದೆ. ಇದೇ ರೀತಿಯ ಕ್ರೂರ ಕೃತ್ಯವೆಸಗಿ ಜೈಲು ಸೇರಿದ ಆಸೂರಾಂ ಬಾಪುರಂತಹ ಸ್ವಯಂ ಘೋಷಿತ ದೇವಮಾನವರು ಬಹಳಷ್ಟು ಮಂದಿ ದೇಶದಾದ್ಯಂತ ಅಮಾಯಕ ಜನರ ಭೇಟೆಯಾಡುತ್ತಿದ್ದಾರೆ. ಈ ಮಂದಿ ಆಡಳಿತರೂಢರ, ಉನ್ನತ ರಾಜಕಾರಣಿಗಳ ಆಶ್ರಯದಲ್ಲಿ ತಮ್ಮ ಅಪರಾಧಿ ಕೃತ್ಯಗಳನ್ನು ಅಡಗಿಸಿಟ್ಟು ಸಾತ್ವಿಕರಂತೆ ಜನರಿಂದ ಪೂಜಿಸಲ್ಪಡುತ್ತಿದ್ದಾರೆ.

ಮೂಢನಂಬಿಕೆ, ಅಂಧವಿಶ್ವಾಸಗಳನ್ನು ತೊಡೆದು ಹಾಕಿ, ಸಂಪೂರ್ಣವಾಗಿ ಸೃಷ್ಟಿಕರ್ತನ ಮೇಲೆ ಭರವಸೆಯಿಡಲು ಕಲಿಸಿದ ಪವಿತ್ರ ಇಸ್ಲಾಮಿನ ಹೆಸರಲ್ಲಿ ಕೆಲವು ಮುಲ್ಲಾ, ಮುಸ್ಲಿಯಾರ್, ತಂಙಳ್, ಶೈಕುನಾ, ಬಾಬಾ, ಬೀವಿಗಳೆಂಬ ಮಂತ್ರವಾದಿಗಳು ನಡೆಸುತ್ತಿರುವ ಕಪಟ ಕರಾಮತ್‌ಗಳಿಗೆ ಬಲಿಯಾಗಿರುವ ಬಹುತೇಕ ಮಂದಿ ಈಮಾನನ್ನು ಕಳೆದುಕೊಂಡು ಅಪ್ಪಟ ಅಂಧವಿಶ್ವಾಸಿಗಳಾಗಿ ಮಾರ್ಪಟ್ಟಿದ್ದಾರೆ. ತಂಙಳ್, ಮುಸ್ಲಿಯಾರ್, ಶೈಖುನಾಗಳೆಂಬ ಕಪಟ ಆಧ್ಯಾತ್ಮ ಪುರುಷರು ಮಂತ್ರಿಸಿಕೊಟ್ಟ ನೂಲು, ತಾಯಿತ, ತಗಡು, ಮೊಟ್ಟೆ, ತೆಂಗಿನಕಾಯಿಗಳನ್ನು ಸೊಂಟ, ಕುತ್ತಿಗೆ, ರಟ್ಟೆ, ಬಾಗಿಲು, ದಾರಂದ, ಪಕ್ಕಾಸುಗಳಿಗೆ ಕಟ್ಟಿ ಬರ್ಕತ್‌ನ ನಿರೀಕ್ಷೆಯಲ್ಲಿರುವ ಮುಸ್ಲಿಮ್ ನಾಮಧಾರಿಗಳು ತಮ್ಮನ್ನು ಸೃಷ್ಟಿಸಿ ಸಕಲ ಅನುಗ್ರಹಗಳನ್ನು ನೀಡಿ ಸಂರಕ್ಷಿಸುತ್ತಿರುವ ಅಲ್ಲಾಹನನ್ನೇ ಮರೆತು ಮಾಂತ್ರಿಕ ತಂಙಳ್, ಮುಸ್ಲಿಯಾರ್‌ಗಳ ಕೈಕಾಲು ಚುಂಬಿಸಿ ಬರ್ಕತ್ ಯಾಚಿಸುತ್ತಿರುವ ದಯನೀಯ ಸ್ಥಿತಿಯನ್ನು ಮುಸ್ಲಿಮ್ ಸಮಾಜದಲ್ಲಿ ಕಾಣುತ್ತಿದ್ದೇವೆ. ದಿವ್ಯ ಶಕ್ತಿಯಿಂದ ಎಂತಹ ಮಾರಕ ರೋಗಗಳನ್ನೂ ಗುಣ ಪಡಿಸುತ್ತೇನೆಂದು ಹೇಳಿಕೊಳ್ಳುವ ಕೆಲ ಹಂತಕ ತಂಙಳ್‌ಗಳು ಜೀವನ್ಮರಣ ಹೋರಾಟದಲ್ಲಿರುವ ರೋಗಿಗಳಿಗೆ ಮಂತ್ರಿಸಿದ ಹಸಿ ನೀರನ್ನು ಕುಡಿಸಿ ಅದೆಷ್ಟೋ ರೋಗಿಗಳ ಜೀವ ತೆಗೆದ ಘಟನೆಗಳು ನಡೆದಿವೆ. ಆದರೆ ಮುಸ್ಲಿಯಾರ್, ತಂಙಳ್‌ಗಳನ್ನು ಪುರೋಹಿತರನ್ನು ಪೂಜ್ಯ ಭಾವನೆಯಿಂದ ಕಾಣುವ ಪುರೋಹಿತ ಭಕ್ತರು ಏನೇ ಆದರೂ ಕಾನೂನುಕ್ರಮ ಕೈಗೊಳ್ಳಲು ಮುಂದಾಗದಿರುವುದೇ ಕಪಟ ಅವುಲಿಯಾ, ತಂಙಳ್, ಶೈಖುನಾಗಳ ಈ ಅಧ್ಯಾತ್ಮಿಕ ವಂಚನಾ ಜಾಲ ಇಷ್ಟೊಂದು ಬೃಹತ್ತಾಗಿ ಬೆಳೆಯಲು ಕಾರಣ.

ಬೇರೆ ಬೇರೆ ರೋಗಗಳನ್ನು ಗುಣ ಪಡಿಸುವ ಸ್ಪೆಷಲಿಸ್ಟ್ ದರ್ಗಾಗಳು ಅಲ್ಲಲ್ಲಿವೆ. ಹುಚ್ಚರನ್ನು ಸಂಕೋಲೆಗಳಿಂದ ಕಟ್ಟಿ ಹಾಕಿ ಮರ್ದಿಸುವ ಏರುವಾಡಿಯಂತಹ ಹಲವಾರು ದರ್ಗಾಗಳಿವೆ. ಅದೇ ರೀತಿ ಮಕ್ಕಳಾಗದವರಿಗೆ ಮಕ್ಕಳನ್ನು ಕರುಣಿಸುವ, ಅವಿವಾಹಿತ ತರುಣಿಯರಿಗೆ ವಿವಾಹ ಸಂಬಂಧ ಏರ್ಪಡಿಸುವ ದರ್ಗಾಗಳೂ ಇವೆ. ಮೂಢನಂಬಿಕೆಗಳ ಗೋದಾಮುಗಳಾಗಿರುವ ದರ್ಗಾಗಳು ಬಂಡವಾಳ ಹಾಕದೆ, ತೆರಿಗೆ ಕಟ್ಟದೆ ಅಪಾರ ಅಕ್ರಮ ಸಂಪತ್ತನ್ನು ದೋಚುವ ಆಧ್ಯಾತ್ಮಿಕ ಶೋಷಣಾ ಕೇಂದ್ರಗಳಾಗಿವೆ. ಸೃಷ್ಟಿಕರ್ತನಾದ ಅಲ್ಲಾಹನನ್ನು ಮಾತ್ರ ಆರಾಧಿಸಬೇಕು, ಅವನೊಡನೆ ಮಾತ್ರ ಪ್ರಾರ್ಥಿಸಬೇಕು, ಅವನಲ್ಲಿ ಮಾತ್ರವೇ ಭರವಸೆಯಿಡಬೇಕೆಂಬ ಏಕದೇವೋಪಾಸನಾ ಸಿದ್ಧಾಂತವನ್ನು ಕಲಿಸುವ ಪವಿತ್ರ ಇಸ್ಲಾಮಿನ ತಳಹದಿಯನ್ನೇ ಬುಡಮೇಲುಗೊಳಿಸುವ ಪುರೋಹಿತ ನೇತೃತ್ವದ ಅಂಧವಿಶ್ವಾಸ, ಅನಾಚಾರ, ಮೂಢನಂಬಿಕೆಗಳ ವಿರುದ್ಧ ಸಮರ ಸಾರುತ್ತಿರುವ ತೌಹೀದೀ ಸಂಘಟನೆಯೊಳಗಿನಿಂದಲೇ ಕೆಲ ಸಾಮೀರಿಗಳು ಇಬ್ಲೀಸನ ಏಜೆಂಟರಾಗಿ ರಂಗಕ್ಕಿಳಿದು ಮಾಟ, ಮಂತ್ರ, ಜಿನ್ನ್, ಸಿಹ್ರ್‌ಗಳ ಹೆಸರಲ್ಲಿ ಸತ್ಯವಿಶ್ವಾಸಿ ಸಮೂಹವನ್ನು ಅಂಧ ವಿಶ್ವಾಸಿಗಳಾಗಿ ಪರಿವರ್ತಿಸಲು ಹೆಣಗಾಡು ತ್ತಿರುವುದು ಖೇದಕರ. ಕಷ್ಟ, ನಷ್ಟ, ಖಾಯಿಲೆಗಳಿಗೀಡಾದ ಅದೆಷ್ಟೋ ಕುಟುಂಬಗಳನ್ನು ನಾಶ ಮಾಡಿದ ಮಾಂತ್ರಿಕರು, ಜ್ಯೋತಿಷ್ಯರು, ಕಪಟ ಅವುಲಿಯಾ, ತಂಙಳ್, ಮುಲ್ಲಾ, ಮುಸ್ಲಿಯಾರ್‌ಗಳ ಆಧ್ಯಾತ್ಮಿಕ ವಂಚನೆ, ಶೋಷಣೆಗಳ ವಿರುದ್ಧ ಜನಜಾಗೃತಿ ಮೂಡಿಸಬೇಕಾಗಿದೆ. ಇಂತಹ ಸಮಾಜ ಕಂಟಕರ ವಿರುದ್ಧ ಸರಕಾರ ಕಠಿಣ ಕ್ರಮ ಕೈಗೊಳ್ಳಬೇಕಾದ ಅಗತ್ಯವಿದೆ. ●

(ಒಂದನೇ ಪುಟದಿಂದ)

ಹಸ್ತಾಂತರಗೊಂಡ ಮತ್ತು ಶತಮಾನಗಳಿಂದ ವಿಕೃತಗೊಳಿಸಲ್ಪಟ್ಟಿರುವ ಪವಿತ್ರವಾದ ಅನುಷ್ಠಾನ ಕರ್ಮಗಳ ಇಸ್ಲಾಮೀ ಪುನರ್ ವ್ಯವಸ್ಥೆಗೆ ಸಾಕ್ಷಿಗಳಾಗಲಿಕ್ಕಾಗಿ ಅವರು ಸಮ್ಮೇಳಿಸಿದ್ದರು. ಪ್ರವಾದಿ(ಸ)ರ ವಿದಾಯ ಭಾಷಣವು ಇಸ್ಲಾಮಿನ ಪೂರ್ತೀಕರಣದ ಘೋಷಣೆ ಮಾತ್ರವಲ್ಲ, ಮಾನವೇತಿಹಾಸದಲ್ಲಿ ಮೊತ್ತ ಮೊದಲಾಗಿ ಮೊಳಗಿದ ಮಾನವ ಹಕ್ಕುಗಳ ಪ್ರತಿಪಾದನೆ ಕೂಡಾ ಆಗಿತ್ತು. ಆಧುನಿಕ ಜಗತ್ತಿನ ಸಾರಥ್ಯವನ್ನು ವಹಿಸಿರುವ ವಿಶ್ವಸಂಸ್ಥೆ ಕೂಡಾ ಹತ್ತಾರು ವರ್ಷಗಳ ಹಿಂದೆ ಡಿಸೆಂಬರ್ ಹತ್ತನ್ನು ಮಾನವ ಹಕ್ಕುಗಳ ದಿನವಾಗಿ ಘೋಷಿಸಿದಾಗ ಅದೊಂದು ಹೆಮ್ಮೆ ಪಡುವಂತಹ ವಿಷಯವೇನೂ ಆಗಿರಲಿಲ್ಲ. ಅದು ಹದಿನಾಲ್ಕು ಶತಮಾನಗಳಿಗಿಂತ ಮುಂಚೆ ಪ್ರವಾದಿ ಮುಹಮ್ಮದ್(ಸ)ರು ಮೊಳಗಿಸಿದ ಮಾನವ ಹಕ್ಕುಗಳ ಘೋಷಣೆಯ ಪುನರಾವರ್ತನೆಯಾಗಿತ್ತೇ ವಿನಾ ಇನ್ನೇನೂ ಅಲ್ಲ.

# ಮಾನವೇತಿಹಾಸದಲ್ಲಿ ಮೊತ್ತಮೊದಲು ಮೊಳಗಿದ ಪ್ರವಾದಿ(ಸ)ರ ಮಾನವ ಹಕ್ಕುಗಳ ಘೋಷಣೆ

ಮಾನವನ ಮಟ್ಟಿಗೆ ಅವನ ಬದುಕಿಗೆ ಪ್ರಥಮ ಹಾಗೂ ಪ್ರಮುಖವಾಗಿರಬೇಕಾದುದು ಆಹಾರ, ವಸತಿ ಮತ್ತು ಆತ್ಮರಕ್ಷಣೆಯಾಗಿದೆ. ಪ್ರತಿಯೊಬ್ಬರೂ ಬಯಸುವುದು ಭಯಮುಕ್ತ ಜೀವನವನ್ನಾಗಿದೆ. ತನ್ನ ಜೀವ ರಕ್ಷಣೆಯ ಹಾಗೆಯೇ ಸಂಪತ್ತು ಹಾಗೂ ಸಂಪಾದನೆಗಳು ಸುರಕ್ಷಿತವಾಗಿರಬೇಕೆಂದು ಅವನು ಇಚ್ಛಿಸುತ್ತಾನೆ. ಸ್ವರಕ್ಷಣೆಯ ಕುರಿತಾದ ಆಶಂಕೆಯು ಮಾನವನನ್ನು ಕರ್ಮರಂಗದಿಂದ ವಿಮುಖನನ್ನಾಗಿ ಮಾಡುತ್ತದೆ. ಕ್ರಮೇಣ ಅದು ಅವನನ್ನು ಅಂತರ್ಮುಖಿಯಾಗಿಯೂ ಹೇಡಿಯಾಗಿಯೂ ಪರಿವರ್ತಿಸುತ್ತದೆ. ಹೀಗೆ ಅದು ಅಸ್ಪಷ್ಟ ಹಾಗೂ ಅರಾಜಕತ್ವಭರಿತವಾದ ಸಾಮಾಜಿಕ ವ್ಯವಸ್ಥೆಗೆ ನಾಂದಿಯಾಗುತ್ತದೆ. ಅಜ್ಞಾನ ಕಾಲದ ಅರಬಿ ಸಮೂಹವು ಹಗೆತನ, ಕಲಹಗಳಲ್ಲಿ ಕುಖ್ಯಾತಿ ಪಡೆದವರಾಗಿದ್ದ ಸ್ಥಿತಿಯಲ್ಲಿ ಅವರ ರಕ್ತದಲ್ಲಿ ಮಿಶ್ರಣಗೊಂಡಿದ್ದ ದ್ವೇಷದ ಕಣಗಳನ್ನು ಬೇರ್ಪಡಿಸಿ ನಿರ್ಭೀತಿಯ ಒಂದು ಬದುಕು ಸಾಧ್ಯವಾಗಬೇಕಾದುದು, ಒಂದು ಉತ್ತಮ ಸಮಾಜದ ನಿರ್ಮಾಣಕ್ಕೆ ಅನಿವಾರ್ಯವಾಗಿರುವುದರಿಂದ ಪ್ರವಾದಿ(ಸ)ರು ತನ್ನ ವಿದಾಯ ಭಾಷಣದಲ್ಲಿ "ಈ ತಿಂಗಳು ಮತ್ತು ಈ ದಿವಸ ಪವಿತ್ರವಾಗಿರುವ ಹಾಗೆಯೇ ನಿಮ್ಮ ಜೀವ ಮತ್ತು ಸಂಪತ್ತು ಪವಿತ್ರವಾಗಿದೆ" ಎಂದು ಒತ್ತಿ ಹೇಳಿದ್ದರು.

ಒಂದು ಸುಭದ್ರ ಸಾಮಾಜಿಕ ಜೀವನಕ್ಕೆ ಪರಸ್ಪರ ವಿಶ್ವಾಸ ಅನಿವಾರ್ಯವಾಗಿದೆ. ಮಾನವರ ಎಲ್ಲಾ ವ್ಯವಹಾರಗಳು ನಡೆಯುವುದು ಪರಸ್ಪರ ವಿಶ್ವಾಸದ ಆಧಾರದಲ್ಲಾಗಿದೆ. ಉಳ್ಳವರು ಇಲ್ಲದವರಿಗೆ ಸಾಲ ಕೊಡುವುದು ಮತ್ತು ಉಳ್ಳವರು ತಮ್ಮ ವಸ್ತುಗಳನ್ನು ಇತರರಲ್ಲಿ ತೆಗೆದಿಡಲಿಕ್ಕಾಗಿ ಕೊಡುವುದು ಇವೆಲ್ಲಾ ಮಾನವನ ಉದ್ಭವ ಮೊದಲ್ಗೊಂಡೇ ನಡೆಯುತ್ತಿವೆ. ಇದಕ್ಕೆ ಆಧಾರ ವಿಶ್ವಸ್ತತೆಯಾಗಿದೆ. ತನ್ನಲ್ಲಿ ವಹಿಸಿಕೊಟ್ಟಿರುವ ಅಮಾನತ್ತುಗಳು ವಸ್ತುವಾಗಲಿ, ವಚನಗಳಾಗಲಿ, ವಾಗ್ದಾನಗಳಾಗಲಿ, ವಹಿಯತ್ತಾಗಲಿ ಯಾವುದೇ ಆಗಲಿ ಅದನ್ನು ಅದರ ಮಾಲಕನಿಗೆ ಹಿಂತಿರುಗಿಸಬೇಕಾದುದು ಪ್ರತೀಯೊಬ್ಬರ ಕರ್ತವ್ಯವಾಗಿದೆ. ಕೋಟಿಗಟ್ಟಲೆ ಬೆಲೆಯ ಸೊತ್ತುಗಳನ್ನು ಕೆಲಸದವರಿಗೆ ವಹಿಸಿಕೊಟ್ಟು ಇಂದು ವ್ಯಾಪಾರ-ವ್ಯವಹಾರಗಳು ನಡೆಯುತ್ತಿವೆ. ಮಾಲಕನಿಗೆ ತಿಳಿಯದಂತೆ ಸೊತ್ತು ಅಪಹರಿಸುವ ವಿಶ್ವಾಸ ದ್ರೋಹಿಗಳು ಬಹಳಷ್ಟಿದ್ದಾರೆ. ಸುಳ್ಳು ಪ್ರಮಾಣ ಹಾಗೂ ಸುಳ್ಳು ಸಾಕ್ಷಿಗಳೊಂದಿಗೆ ಇತರರ ಸಂಪತ್ತನ್ನು ಕಬಳಿಸುವ ವಂಚಕರೂ ಸಾಕಷ್ಟಿದ್ದಾರೆ. ಸಾರ್ವಜನಿಕ ಸೊತ್ತಿನಿಂದ ಸಾಧ್ಯವಾದಷ್ಟನ್ನು

(5ನೇ ಪುಟಕ್ಕೆ)

# ಪವಿತ್ರ ಕುರ್‌ಆನಿನ ವಿಶಿಷ್ಟ ಅಧ್ಯಾಯಗಳು

✍ ಮುಸ್ತಫಾ ಧಾರಿಮಿ ಖತಾರ್

ಪವಿತ್ರ ಕುರ್‌ಆನ್ ಮಾನವ ಸಮುದಾಯದ ಮಾರ್ಗದರ್ಶಿಯಾಗಿದೆ. 114 ಅಧ್ಯಾಯಗಳಾಗಿ, ಜನರ ಶಾಶ್ವತ ವಿಜಯಕ್ಕೆ ಅಗತ್ಯವಿರುವ ಸಕಲ ವಿಷಯಗಳನ್ನು ಪ್ರಸ್ತಾಪಿಸಿದ ಗ್ರಂಥವಾಗಿದೆ ಇದು. ಸೃಷ್ಟಿಕರ್ತನಾದ ಅಲ್ಲಾಹನ ವಚನಗಳಾದ ಕುರ್‌ಆನಿನ ಎಲ್ಲಾ ಅಧ್ಯಾಯಗಳು ಮತ್ತು ಸೂಕ್ತಗಳು ಅತ್ಯಂತ ಮಹತ್ವವಿರುವಂತಹದಾಗಿದೆ. ಇದರ ಪ್ರತಿಯೊಂದು ಅಕ್ಷರವನ್ನು ಓದುವುದಕ್ಕೂ ಪುಣ್ಯವಿದೆಯೆಂದು ಪ್ರವಾದಿ(ಸ)ರು ಹೇಳಿದ್ದಾರೆ.

ಆದರೆ ಕೆಲವು ಅಧ್ಯಾಯಗಳು ಮತ್ತು ಸೂಕ್ತಗಳಿಗೆ ವಿಶೇಷ ಪ್ರಾಮುಖ್ಯತೆಯಿರುವುದನ್ನು ಕಾಣಬಹುದಾಗಿದೆ. ಅವುಗಳ ವಸ್ತು ತಾತ್ಪರ್ಯದ ಗಾಂಭೀರ್ಯತೆಯನುಸಾರವಾಗಿ ಈ ಪ್ರಾಧಾನ್ಯತೆ ನೀಡಲಾಗಿದೆ. ಕುರ್‌ಆನ್ ಪಾರಾಯಣವು ವಾಸ್ತವದಲ್ಲಿ ವಚನಗಳ ಆಶಯಗಳನ್ನು ಅರ್ಥೈಸಿಕೊಂಡಾಗಿರಬೇಕು. ಏಕದೇವ ವಿಶ್ವಾಸ ಮತ್ತು ಪರಲೋಕದ ಕುರಿತಾದ ಅಧ್ಯಾಯಗಳನ್ನು ಪ್ರವಾದಿ(ಸ)ರು ಹೆಚ್ಚೆಚ್ಚು ಓದುತ್ತಿದ್ದರೆಂಬುದಾಗಿ ಕಾಣಬಹುದಾಗಿದೆ. ಕುರ್‌ಆನಿನಲ್ಲಿ ಹೆಚ್ಚಾಗಿ ಮನುಷ್ಯ ಮನಸ್ಸುಗಳಲ್ಲಿ ವಿಶ್ವಾಸ ಹಾಗೂ ಭಕ್ತಿ ತಂಗಿ ನಿಲ್ಲಲು ಸಹಾಯವಾಗುವ ವಚನಗಳನ್ನು ಕಾಣಲು ಸಾಧ್ಯವಿದೆ. ಪ್ರವಾದಿಮರು ಪ್ರತ್ಯೇಕವಾಗಿ ಎತ್ತಿ ಹೇಳಿದ ಕೆಲವು ಅಧ್ಯಾಯಗಳು ಮತ್ತು ವಚನಗಳ ವೈಶಿಷ್ಟ್ಯತೆಗಳನ್ನು ಈ ಕೆಳಗೆ ಕೊಡಲಾಗಿದೆ.

**ಸೂರಾಃ ಫಾತಿಹಾ:** ನಮಾಝ್‌ನಲ್ಲಿ ಕಡ್ಡಾಯವಾಗಿ ಓದಬೇಕಾದ ಈ ಅಧ್ಯಾಯಕ್ಕೆ ಸೂರಾಃ ಸ್ವಲಾತ್ತ್ ಎಂದು ಹೆಸರಿದೆ. ಮಾತ್ರವಲ್ಲ, ಅದರ ಆಶಯ ಹಾಗೂ ಪ್ರಾಧಾನ್ಯಗಳನ್ನು ಪರಿಗಣಿಸಿ ಫಾತಿಹತುಲ್ ಕಿತಾಬ್ (ಪ್ರಾರಂಭ), ಉಮ್ಮುಲ್ ಕುರ್‌ಆನ್, ಉಮ್ಮುಲ್ ಕಿತಾಬ್, ಅಸಾಸುಲ್ ಕುರ್‌ಆನ್ (ತಳಹದಿ), ಅಲ್ ಕಾಫಿಯ (ಸಂಪೂರ್ಣ), ಅಲ್‌ಕನ್‌ಝ್(ನಿಧಿ), ಅಲ್ ಹಮ್ದ್(ಸ್ತುತಿ), ದುಆ(ಪ್ರಾರ್ಥನೆ), ಸಬ್‌ಉಲ್ ಮಸಾನಿ (ಏಳು ಆವರ್ತಿತ ವಚನಗಳು) ಮುಂತಾದ ಹೆಸರುಗಳಲ್ಲೂ ಈ ಅಧ್ಯಾಯವನ್ನು ಪರಿಚಯಿಸಲಾಗಿದೆ. ಪ್ರವಾದಿ(ಸ)ರು ಹೇಳಿದರು: "ತೌರಾತ್ತ್‌ನಲ್ಲಾಗಲಿ, ಇಂಜೀಲ್‌ನಲ್ಲಾಗಲೀ, ಝಬೂರ್‌ನಲ್ಲಾಗಲಿ, ಸ್ವತಃ ಕುರ್‌ಆನಿನಲ್ಲಾಗಲಿ ಇಷ್ಟೊಂದು ಮಹತ್ವವಿರುವ ಇನ್ನೊಂದು ಅಧ್ಯಾಯವಿಲ್ಲ. ಅವು ಏಳು ಆವರ್ತಿತ ವಚನಗಳು ಮತ್ತು ಕುರ್‌ಆನಿನ ಒಟ್ಟು ಮೊತ್ತವಾಗಿದೆ" (ಬುಖಾರಿ, ಮುಸ್ಲಿಮ್). ಪ್ರವಾದಿ(ಸ)ರು ಹೇಳುತ್ತಾರೆ: "ಅಲ್ಲಾಹು ಹೇಳಿದ್ದಾನೆ - ನಮಾಝನ್ನು ನಾನೂ ನನ್ನ ದಾಸನೂ ಪಾಲು ಗಟ್ಟುವೆವು; ಅವನು ಕೇಳಿದ್ದನ್ನು ನಾನು ಕೊಡುವೆನು. ಅವನು ಅಲ್‌ಹಮ್ದುಲಿಲ್ಲಾಹಿ ರಬ್ಬಿಲ್ ಆಲಮೀನ್ ಎಂದು ಹೇಳಿದರೆ ಅಲ್ಲಾಹು ಹೇಳುವನು - ನನ್ನ ದಾಸನು ನನ್ನನ್ನು ಸ್ತುತಿಸಿದ್ದಾನೆ. ಅವನು ಅರ್ರಹ್ಮಾನಿರ್ರಹೀಮ್ ಎಂದು ಹೇಳಿದರೆ ಅಲ್ಲಾಹು ಹೇಳುವನು - ನನ್ನ ದಾಸನು ನನ್ನನ್ನು ಪ್ರಶಂಸಿಸಿದ್ದಾನೆ. ಅವನು ಮಾಲಿಕಿ ಯೌಮಿದ್ದೀನ್ ಎಂದು ಹೇಳಿದರೆ ಅಲ್ಲಾಹು ಹೇಳುವನು - ನನ್ನ ದಾಸನು ನನ್ನನ್ನು ಕೊಂಡಾಡಿದ್ದಾನೆ. ಅವನು ಇಯ್ಯಾಕ ನಅಬುದು... ಹೇಳಿದರೆ ಅಲ್ಲಾಹು ಹೇಳುವನು - ಇದು ನನ್ನ ಮತ್ತು ನನ್ನ ದಾಸನ ನಡುವಿನ ವ್ಯವಹಾರವಾಗಿದೆ. ಅವನು ಏನನ್ನು ಕೇಳಿದರೂ ಅವನಿಗೆ ನಾನು ಕೊಡುವೆನು. ಅವನು ಇಹ್‌ದಿನ... ವಲದ್ದಾಲ್ಲೀನ್ ಎಂದು ಹೇಳಿದರೆ ಅಲ್ಲಾಹು ಹೇಳುವನು - ಇದೆಲ್ಲವನ್ನೂ ನಾನು ನನ್ನ ದಾಸನಿಗೆ ಕೊಡುವೆನು" (ಮುಸ್ಲಿಮ್).



ಇನ್ನೊಂದು ಬಾರಿ ಪ್ರವಾದಿ(ಸ)ರು ಹೇಳಿದರು: "ಬೇರಾವ ಪ್ರವಾದಿಗೂ ಲಭಿಸದಂತಹ ಎರಡು "ಬೆಳಕುಗಳು" ನನಗೆ ಲಭಿಸಿದೆ. ಅವೆಂದರೆ ಸೂರಾಃ ಫಾತಿಹಾ ಮತ್ತು ಸೂರಾಃ ಅಲ್ ಬಕರದ ಕೊನೆಯ ವಚನಗಳಾಗಿವೆ. ಅದರ ಪ್ರತಿಯೊಂದು ಅಕ್ಷರವೂ ಮಹತ್ತರ ಪ್ರತಿಫಲವುಳ್ಳದ್ದಾಗಿದೆ: (ಮುಸ್ಲಿಮ್). ಪ್ರವಾದಿ(ಸ)ರು ನಮಾಝ್‌ನ ಬಳಿಕ ನಿದ್ರಿಸಲು ಮುಂದಾಗುವಾಗಲೂ ಸೂರಾಃಫಾತಿಹಾ ಓದುತ್ತಿದ್ದರು.

**ಸೂರಾಃ ಅಲ್ ಬಕರಃ:** ಕುರ್‌ಆನಿನ ಅತೀ ದೊಡ್ಡ ಅಧ್ಯಾಯವಾದ ಸೂರಾಃ ಅಲ್ ಬಕರದ ಕುರಿತು ಪ್ರವಾದಿ(ಸ)ರು ಹೇಳಿದರು: "ನೀವು ನಿಮ್ಮ ಮನೆಗಳನ್ನು ಕಬರ್‌ಗಳಂತೆ ಮಾಡಬೇಡಿರಿ. ಖಂಡಿತವಾಗಿಯೂ ಸೂರಾಃ ಅಲ್‌ಬಕರಃ ಪಾರಾಯಣ ಮಾಡುವ ಮನೆಗಳಿಂದ ಶೈತಾನನು ದೂರ ಹೋಗುವನು" (ಮುಸ್ಲಿಮ್).

ಕಡ್ಡಾಯ ನಮಾಝ್‌ನ ಬಳಿಕ ನಿದ್ರಿಸಲು ಮುಂದಾಗುವಾಗಲೂ ಪ್ರವಾದಿ(ಸ)ರು ಓದುತ್ತಿದ್ದ ಆಯತ್ತುಲ್ ಕುರ್ಸಿ ಸೂರತ್ತುಲ್ ಬಕರಃದ ವಚನಗಳಾಗಿವೆ. ಪ್ರವಾದಿ(ಸ)ರು ಹೇಳಿದರು: "ಕಡ್ಡಾಯ ನಮಾಝ್‌ನ ಬಳಿಕ ಯಾರಾದರೂ ಆಯತ್ತುಲ್ ಕುರ್ಸಿ ಓದಿದರೆ ಸ್ವರ್ಗ ಪ್ರವೇಶಕ್ಕೆ ಮರಣದ ವಿನಾ ಬೇರಾವ ತಡೆಯೂ ಅವನಿಗಿರದು" (ನಸಾಈ). ಪಾರಾಯಣ ಮಾಡಿದರೆ ಮಾತ್ರ ಸಾಲದು, ಅದರ ಸಾರಾಂಶ ಬದುಕಿನ ಅಂಗವಾಗಿ ಮಾರ್ಪಡಬೇಕಾಗಿದೆ. ಇಬ್‌ನು ಮಸ್‌ಊದ್(ರ)ರವರು ಹೇಳುತ್ತಾರೆ: "ಸೂರತ್ತುಲ್ ಬಕರಃದ ಕೊನೆಯ ಎರಡು ವಚನಗಳನ್ನು ರಾತ್ರಿ ವೇಳೆ ಯಾರಾದೂ ಓದಿದರೆ ಅವನಿಗೆ ಅದುವೇ ಸಾಕು" (ಬುಖಾರಿ).

**ಸೂರಾಃ ಆಲ್ ಇಮ್ರಾನ್:** ಅಬೂ ಉಮಾಮತ್ತುಲ್ ಬಾಹಿಲಿ(ರ)ರು ಹೇಳುತ್ತಾರೆ: "ಪ್ರವಾದಿ(ಸ)ರು ಹೇಳಿದರು - ನೀವು ಕುರ್‌ಆನ್ ಓದಿರಿ. ಅಂತ್ಯ ದಿನದಂದು ಅದು ಅವರಿಗೆ ಖಂಡಿತ ಶಿಫಾರಸುದಾರನಾಗಿ ಬರುವುದು. ನೀವು ಸೂರತ್ತುಲ್ ಬಕರಃ ಮತ್ತು ಸೂರಾಃ ಆಲ್ ಇಮ್ರಾನ್ ಓದಿರಿ. ನಿಶ್ಚಯವಾಗಿಯೂ ಅವು ಪರಲೋಕದಲ್ಲಿ ಕಾರ್ಮೋಡಗಳಾಗಿಯೂ ಪಕ್ಷಿ ಕೂಟಗಳಾಗಿಯೂ ಬಂದು ನಿಮಗಾಗಿ ವಾದಿಸುವುವು" (ಮುಸ್ಲಿಮ್).

**ಸೂರಃ ಹೂದ್, ವಾಖಿಅಃ, ಮುರ್‌ಸಲಾತ್ತ್, ನಬಅ್ ಮತ್ತು ತಕ್‌ವೀರ್:** ಇವು ಅಂತ್ಯ ದಿನ ಮತ್ತು ಪರಲೋಕದ ಭೀಕರತೆಯ ಕುರಿತು ವಿವರಿಸುವ ಅಧ್ಯಾಯಗಳಾಗಿವೆ. ಒಮ್ಮೆ ಅಬೂಬಕರ್(ರ) ರವರೊಡನೆ ಹೇಳಿದರು: ಅಲ್ಲಾಹನ ರಸೂಲರೇ, ತಾವು ನರೆತು ಹೋಗಿದ್ದೀರಲ್ಲವೇ, ಪ್ರವಾದಿ(ಸ)ರು ಹೇಳಿದರು: "ಹೂದ್, ವಾಖಿಅ, ಮುರ್‌ಸಲಾತ್ತ್, ನಬಅ್, ತಕ್‌ವೀರ್ ಎಂಬೀ ಅಧ್ಯಾಯಗಳು ನನ್ನನ್ನು ನರೆಯುವಂತೆ ಮಾಡಿತು" (ತುರ್ಮುದಿ). "ಹೂದ್ ಮತ್ತು ಅದೇ ರೀತಿಯ ಅಧ್ಯಾಯಗಳು ನನಗೆ ಅಕಾಲ ನರೆತವನ್ನು ಸನ್ನಾನಿಸಿದವು" (ಅಲ್ ಜಾಮಿಉಲ್‌ಸ್ವಗೀರ್).

**ಮುಸಬ್ಬಿಹಾತ್ತ್:** ಸುಬ್‌ಹಾನ, ಸಬ್ಬಹ, ಯುಸಬ್ಬಿಹು ಎಂದೆಲ್ಲಾ ಅಲ್ಲಾಹನನ್ನು ಪ್ರಶಂಸಿಸುವ ಪದಗಳಿಂದ ಪ್ರಾರಂಭವಾಗುವ ಇಸ್ರಾಅ್, ಹದೀದ್, ಹಶ್ರ್, ಸ್ವಫ್ಫ್, ಜುಮುಅ, ತಗಾಬೂನ್, ಅಅ್‌ಲಾ ಎಂಬೀ ಅಧ್ಯಾಯಗಳು ಮುಸಬ್ಬಿಹಾತುಗಳಾಗಿವೆ". ಇರ್ಬಾದ್‌ಬಿನ್ ಸಾರಿಯ(ಸ)ರವರು ವರದಿ ಮಾಡುತ್ತಾರೆ: "ಪ್ರವಾದಿ(ಸ)ರು ಮುಸಬ್ಬಿಹಾತ್ತುಗಳನ್ನು ಓದದೆ ನಿದ್ರಿಸುತ್ತಿರಲಿಲ್ಲ. ಅವುಗಳಲ್ಲಿ ಸಾವಿರ ವಚನಗಳಿಗಿಂತಲೂ ಮಹತ್ವವಿರುವ ಒಂದು ವಚನವಿದೆ" (ತಿರ್ಮುದಿ).

**ಸೂರಾಃ ಅಝ್ಝುಮರ್:** ಆಯಿಶಾ(ರ)ರು ಹೇಳುತ್ತಾರೆ: "ಪ್ರವಾದಿ(ಸ)ರು ಸೂರತುಝ್ಝುಮರ್ ಮತ್ತು ಇಸ್ರಾಅ್ ಓದಿಯೇ ನಿದ್ರಿಸುತ್ತಿದ್ದರು" (ತಿರ್ಮುದಿ).

**ಸೂರಾಃ ಅಲ್‌ಕಹ್ಫ್:** ಯಾರಾದರೂ ಸೂರಾಃ ಅಲ್ ಕಹ್ಫ್ ಪಾರಾಯಣ ಮಾಡಿದರೆ ಅಂತ್ಯ ದಿನದಲ್ಲಿ ಅದು ಅವರಿಗೆ ಬೆಳಕನ್ನು ನೀಡುವುದು. ಅದರ ಮೊದಲ ಹತ್ತು ವಚನಗಳನ್ನು ಕಲಿತರೆ ಅವನು ದಜ್ಜಾಲನಿಂದ ರಕ್ಷಣೆ ಹೊಂದುವನೆಂದೂ ಶುಕ್ರವಾರ ರಾತ್ರಿ ಅಥವಾ ಹಗಲು ಸೂರತ್ತು ಕಹ್ಫ್ ಓದುವವನಿಗೆ ಅದು ಬೆಳಕನ್ನು ನೀಡುವುದೆಂದೂ ಹಾಕಿಮ್, ಬೈಹಕಿ, ಅಬೂದಾವೂದ್, ತಿರ್ಮುದಿ ಮುಂತಾದವರು ವರದಿ ಮಾಡಿದ್ದಾರೆ.

**ಸೂರಾಃ ಅಲ್‌ಫತ್‌ಹ್:** ಅನಸ್(ರ) ಹೇಳುತ್ತಾರೆ: "ಪ್ರವಾದಿ(ಸ)ರು ಹುದೈಬಿಯ್ಯದಿಂದ ಮರಳುವಾಗ ಸೂರತ್ತುಲ್ ಫತ್‌ಹ್ ಅವತೀರ್ಣಗೊಂಡಿತು. ಆ ಸಂದರ್ಭದಲ್ಲಿ ಅನುಯಾಯಿಗಳು ಅತ್ಯಂತ ದುಃಖಿತರಾಗಿದ್ದರು. ಮಕ್ಕಾಕ್ಕೆ ಪ್ರವೇಶಿಸಲಾಗದೆ ಹುದೈಬಿಯ್ಯದಲ್ಲಿ ಬಲಿ ಕೊಯ್ದು ಅವರು ಮರಳುತ್ತಿದ್ದರು. ಈ ಸೂರಾಃದ "ಇನ್ನಾ ಫತ್‌ಹ್‌ನಾಲಕ" ಎಂದು ಪ್ರಾರಂಭವಾಗುವ ಎರಡು ವಚನಗಳ ಕುರಿತು ಪ್ರವಾದಿ(ಸ)ರು ಹೀಗೆ ಹೇಳಿದರು: "ನನಗೆ ಎರಡು ಆಯತ್‌ಗಳು ಇಳಿದಿವೆ. ಅದು ಭೂಲೋಕದಲ್ಲಿ ನನಗೆ ಅತ್ಯಂತ ಇಷ್ಟಪಟ್ಟದ್ದಾಗಿದೆ" (ಅಹ್ಮದ್).

**ಸೂರಾಃ ಅಲ್‌ಮುಲ್ಕ್:** ಅಬೂ ಹುರೈರಾ(ರ) ಹೇಳುತ್ತಾರೆ: "ಪ್ರವಾದಿ(ಸ)ರು ಹೀಗೆ ಹೇಳಿದರು - ಕುರ್‌ಆನಿನ 30 ವಚನಗಳಿರುವ ಒಂದು ಅಧ್ಯಾಯವು ಒಬ್ಬರಿಗೆ ಪಾಪ ವಿಮೋಚನೆಗಾಗಿ ಶಿಫಾರಸು ಮಾಡಿತು. ಅದು ಸೂರತ್ತುಲ್ ಬಾರಕ(ಅಲ್‌ಮುಲ್ಕ್)ವಾಗಿದೆ" (ತಿರ್ಮುದಿ). ಈ ಅಧ್ಯಾಯವನ್ನು ಒಬ್ಬರು ನಿದ್ರಿಸುವುದಕ್ಕೆ ಮುನ್ನ ಓದಿದರೆ ಆತನಿಗೆ 30 ಒಳಿತುಗಳು ಲಭಿಸಲಿವೆ. 30 ಪಾಪಗಳು ಕ್ಷಮಿಸಲ್ಪಡಲಿವೆ. 30 ಪದವಿಗಳು ಲಭಿಸಲಿವೆ ಮತ್ತು ಆತನಿಗೆ ಕಬರ್‌ನಲ್ಲಿ ಅನುಕೂಲವಾಗಲಿದೆ ಎಂದು ಹದೀಸ್‌ಗಳಲ್ಲಿ ಪ್ರಸ್ತಾಪಿಸಲಾಗಿದೆ. (4ನೇ ಪುಟಕ್ಕೆ)

سلسلة الأحاديث الضعيفة والموضوعة

# ದುರ್ಬಲ ಮತ್ತು ಕೃತಕ ಹದೀಸ್‌ಗಳು



## ಒಂದು ಅವಲೋಕನ ಭಾಗ - 21

## ಇವು ಸಹೀಹ್ ಎಂಬ ಕಲ್ಪನೆ ಬಿಡಿ

✍ ಎಂ.ಇ. ಅಶ್ರಫ್ ಮುಸ್ಲಿಯಾರ್
ಕಾಸರಗೋಡು

ಕೆಲವು ಹದೀಸ್‌ಗಳು ಬಿಂಬಿಸುವ ಅರ್ಥ ಮತ್ತು ಆಶಯಗಳ ಕುರಿತು ಗಂಭೀರವಾಗಿ ಚಿಂತನೆ ಮಾಡುವ ಅನಿವಾರ್ಯತೆ ನಮ್ಮೆದುರಿಗಿದೆ. ಉದಾಹರಣೆಗೆ: ಈ ಕೆಳಗಿನ ಹದೀಸನ್ನು ಗಮನಿಸಿರಿ:

"ನಿಮ್ಮ ಪ್ರಪಂಚದಿಂದ ನನಗೆ ಪ್ರಿಯವಾದುವು ಮಹಿಳೆಯರು ಮತ್ತು ಸುಗಂಧ ದ್ರವ್ಯ. ಅನ್ನ-ಪಾನೀಯಗಳನ್ನು ತ್ಯಜಿಸಿದರೂ ನಾನು ಮಹಿಳೆಯರಿಂದ ಬಿಟ್ಟು ನಿಲ್ಲಲಾರೆ" (ಇಮಾಮ್ ಅಹ್ಮದ್, ಕಿತಾಬು ಝುಹ್‌ದ್).

ನಊಝುಬಿಲ್ಲಾಹ್! ಅಲ್ಲಾಹನ ಸಂದೇಶವಾಹಕರು ಹೀಗೆ ಹೇಳಿದರೆಂದು ಓರ್ವ ಸತ್ಯವಿಶ್ವಾಸಿ ನಂಬಲು ಸಾಧ್ಯವೇ? ಇದು ಮುಂಕರ್‌ನ ಸಾಲಿಗೆ ಸೇರಿದ ದುರ್ಬಲ ಹದೀಸ್.

ಇದರ ಪರಂಪರೆಯಲ್ಲಿರುವ ಯೂನುಸ್ ಬಿನ್ ಅತಿಯತುಸ್ಸಿಫಾರ್ ಎಂಬಾತನನ್ನು ಇಮಾಮ್ ಬುಖಾರಿ(ರ)ರವರು ತಿರಸ್ಕೃತ ವರದದಿಗಾರರ ಸಾಲಿಗೆ ಸೇರಿಸಿದ್ದಾರೆ. ಇಬ್ನು ಮುಈನ್ "ಈತ ಹದೀಸ್ ರಂಗದಲ್ಲಿ ಏನೂ ಅಲ್ಲ" ಎಂದಿದ್ದಾರೆ.

ಅಷ್ಟೇ ಅಲ್ಲದೆ ಇದೇ ಸನದ್‌ನಲ್ಲಿ ಸಾಬಿತುಲ್ ಬನ್ನಾನ್ ಎಂಬ ಮತ್ತೊಬ್ಬ ವರದಿಗಾರನಿದ್ದಾನೆ. ಈ ವ್ಯಕ್ತಿಯ ಕುರಿತು ಪ್ರಸಿದ್ಧ ಮುಹದ್ದಿಸ್ ಇಬ್ನು ಹಿಬ್ಬಾನ್(ರ) ಹೇಳುವುದು ನೋಡಿ"ಸಾಬಿತುಲ್ ಬನ್ನಾನ್ ಹದೀಸ್‌ಗಳನ್ನು ಸ್ಥಾನಪಲ್ಲಟಗೊಳಿಸುವ (ತಿರುಗು ಮುರುಗು) ಮತ್ತು ಸಹೀಹ್ ಆದ ಹದೀಸ್‌ಗಳಿಗೆ ದುರ್ಬಲ ಮತ್‌ನ್‌ಗಳನ್ನು ರಚಿಸುವ ವ್ಯಕ್ತಿಯಾಗಿದ್ದು ಆದುದರಿಂದ ಇವನ ಯಾವ ಹದೀಸ್ ಕೂಡಾ ಆಧಾರ ಯೋಗ್ಯವಲ್ಲ". (ನೋಡಿ: ಸೌನುಶ್ಶರೀಅಲ್ ಹನೀಫ್ ಬಿಬಯಾನಿಲ್ ಮೌದೂಅ್ ವದ್ದ‌ಈಫ್: 48).

"ಮೀಲಾದುನ್ನಬಿ" ಆಚರಿಸುವಾಗ ಪ್ರವಾದಿ ಪ್ರೇಮದ ಪೀಠಿಕೆಯಾಗಿ ಮುಲ್ಲಾ-ಮುಸ್ಲಿಯಾರ್‌ಗಳು ಸಾಮಾನ್ಯವಾಗಿ ಉಲ್ಲೇಖಿಸುವ ಈ ಕೆಳಗಿನ ಹದೀಸನ್ನು ಗಮನಿಸಿ.

"ಯಾರಾದರೂ ನನ್ನ ಸುನ್ನತ್ತನ್ನು ಜೀವಂತಗೊಳಿಸಿದರೆ ಆತ ನನ್ನನ್ನು ಪ್ರೀತಿಸಿದಂತೆ ಮತ್ತು ನನ್ನನ್ನು ಪ್ರೀತಿಸಿದವರು ನನ್ನೊಂದಿಗೆ ಸ್ವರ್ಗದಲ್ಲಿರುವರು".

ಪ್ರವಾದಿ ಪ್ರೇಮದ ಮಾನದಂಡ ಅವರ ಅನುಸರಣೆ ಎಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಆದರೆ ಇದು ಪ್ರವಾದಿಯವರು ಹೇಳಿದ್ದಾಗಿ ಸಾಬೀತಾಗಿಲ್ಲ. ಕಾರಣ ಈ ಹದೀಸ್‌ನ ಸನದ್‌ನಲ್ಲಿರುವ ಖಾಲಿದ್ ಬಿನ್ ಅನಸ್ ಹಾಗೂ ಇಯಾಳ್ ಬಿನ್ ಸಈದ್ ಇಬ್ಬರೂ ಅಜ್ಞಾತ ವರದಿಗಾರರು (ಮಜ್‌ಹೂಲಾನಿ) ಎಂಬುದಾಗಿ ಶೈಖ್ ಅಮ್ರ್ ಅಬ್ದುಲ್ ಮುನ್ಇಮ್ ಸ್ಪಷ್ಟ ಪಡಿಸಿರುವುದಲ್ಲದೆ ಪ್ರಸಿದ್ಧ ಹದೀಸ್ ವಿಮರ್ಶಕ ಇಮಾಮ್ ದ್ದಹಬಿ ಇದು ಅತ್ಯಂತ ತಿರಸ್ಕೃತವಾದ ಹದೀಸ್ ಎಂದು ಹೇಳಿದ್ದಾರೆ (ಮೀಝಾನುಲ್ ಈತಿದಾಲ್).

"ಉತ್ತರ ಸಿಗುತ್ತದೆ ಎಂದು ದೃಢ ವಿಶ್ವಾಸದೊಂದಿಗೆ ನೀವು ಅಲ್ಲಾಹನಲ್ಲಿ ಪ್ರಾರ್ಥಿಸಿರಿ. ಏಕೆಂದರೆ ಅಲ್ಲಾಹು ಅಶ್ರದ್ಧ ಹೃದಯದ ಪ್ರಾರ್ಥನೆ ಸ್ವೀಕರಿಸಲಾರ". (ತಿರ್ಮುದಿ: 3479), ಹಾಕೀಮ್: 1:493), (ಇಬ್ನು ಹಿಬ್ಬಾನ್: 1:372) ಇವರೂ ಅಲ್ಲದೆ ಇನ್ನೂ ಹಲವರು ಈ ಹದೀಸ್ ವರದಿ ಮಾಡಿದ್ದಾರೆ. ಇದು ಮುಂಕರ್ ಆದ ಹದೀಸ್ ಎಂದು ವಿದ್ವಾಂಸರು ಸ್ಪಷ್ಟಪಡಿಸಿದ್ದಾರೆ. ಇದರ ಪರಂಪರೆಯಲ್ಲಿರುವ ಸ್ವಾಲಿಹ್ ಬಿನ್ ಬಶೀರ್ ಹದೀಸ್ ಕ್ಷೇತ್ರದಲ್ಲಿ ತಿರಸ್ಕೃತನೆಂದು ಇಮಾಮ್ ದಹಬಿ ಹೇಳಿದ್ದಾರೆ.

"ನೀವು ಕುರ್‌ಆನ್ ಪಂಡಿತರನ್ನು ಗೌರವಿಸಿರಿ, ಯಾರಾದರೂ ಅವರನ್ನು ಗೌರವಿಸಿದರೆ ಆತ ನನ್ನನ್ನು ಗೌರವಿಸಿದಂತೆ ಮತ್ತು ನನ್ನನ್ನು ಯಾರು ಗೌರವಿಸುತ್ತಾರೋ ಅವರು ಅಲ್ಲಾಹನನ್ನು ಗೌರವಿಸಿದಂತೆ" (ದೈಲಮಿ, ಮುಸ್ನದ್). ಇದು ಕೃತಕ ನಿರ್ಮಿತ ಹದೀಸ್. ಇಮಾಮ್ ಸಖಾವಿ ಇದನ್ನು ಅಲ್ ಮಖಾಸಿದುಲ್ ಹಸನ(152)ದಲ್ಲಿ ವಿವರಿಸಿದ್ದಾರೆ.

ಪ್ರವಾದಿ(ಸ)ರವರು "ಓ ಅಲ್ಲಾಹ್ ನೀನು ಮುಅಲ್ಲಿಮ್(ಜ್ಞಾನ ಕಲಿಸುವವರು)ಗಳಿಗೆ ಕ್ಷಮಿಸು. (ಮೂರು ಬಾರಿ) ಅವರಿಗೆ ದೀರ್ಘಾಯುಷ್ಯ ನೀಡು ಮತ್ತು ಅವರ ಹುದ್ದೆಯಲ್ಲಿ ಬರ್ಕತ್ ಕರುಣಿಸು" (ಖತೀಬ್: ತಾರೀಖು ಬಗ್ದಾದ್).

ಇದು ಕೂಡಾ ಕೃತಕ ನಿರ್ಮಿತ. ಇಮಾಮ್ ಇಬ್ನುಲ್ ಖಯ್ಯೂಮ್(ರ) ಹೇಳುತ್ತಾರೆ. ಈ ಹದೀಸ್ ಪ್ರವಾದಿ(ರ)ರವರಿಂದ ಸ್ಥಿರ ಪಟ್ಟಿರು ವುದಿಲ್ಲ. ಇದರ ಪರಂಪರೆಯಲ್ಲಿ ಅಜ್ಞಾತರು, ಸುಳ್ಳರು, ಕೃತಕ ನಿರ್ಮಿತ ವರದಿಗಾರರಿದ್ದಾರೆ ಎಂಬುದಾಗಿ ಶೈಖ್ ಅಮ್ರ್ ಅಬ್ದುಲ್ ಮುನ್ ಇಮ್ ಸ್ಪಷ್ಟಪಡಿಸಿದ್ದಾರೆ.

(ನೋಡಿ: ಸೌನುಶ್ಶರೀಅಲ್ ಹನೀಫ್ ಬಿಬಯಾನಿಲ್‌ಮೌದೂಇವದ್ದ‌ಈಫ್ ಪುಟ: 178)

(ಮುಂದಿನ ಸಂಚಿಕೆಯಲ್ಲಿ: ಆಭರಣದ ಝಕಾತ್ - ಹದೀಸ್‌ಗಳ ಬಲಾಬಲ)

(3ನೇ ಪುಟದಿಂದ)

## ಪವಿತ್ರ ಕುರ್‌ಆನಿನ ವಿಶಿಷ್ಟ ಅಧ್ಯಾಯಗಳು

**ಸೂರಾಃ ಯಾಸೀನ್:** ಮಲ್‌ಖಿಲುಬ್‌ನು ಯಸಾರ್(ರ) ಹೇಳುತ್ತಾರೆ: "ಯಾಸೀನ್ ಕುರ್‌ಆನಿನ ಹೃದಯವಾಗಿದೆಯೆಂದು ಪ್ರವಾದಿ(ಸ)ರು ಹೇಳಿದ್ದಾರೆ(ಅಬೂದಾವೂದ್). ಕುರ್‌ಆನಿನ ಪ್ರಧಾನ ವಿಷಯಗಳ ಪೈಕಿ ಅಂತ್ಯದಿನ ಮತ್ತು ಆ ಬಳಿಕದ ಸಂಭವಗಳ ಕುರಿತು ಈ ಅಧ್ಯಾಯದಲ್ಲಿ ಅತೀ ಹೆಚ್ಚು ಪ್ರಸ್ತಾಪಿಸಲಾಗಿದೆ.

**ಸೂರತ್ತುಸ್ಸಜದ:** ಜಾಬಿರ್(ರ) ಹೇಳುತ್ತಾರೆ: "ಪ್ರವಾದಿ(ಸ)ರು ನಿದ್ರಿಸುವುದಕ್ಕಿಂತ ಮುಂಚೆ ಸೂರತ್ತುಸ್ಸಜದ ಮತ್ತು ಅಲ್‌ಮುಲ್ಕ್ ಓದುತ್ತಿದ್ದರು" (ತಿರ್ಮುದಿ). ಪ್ರವಾದಿ(ಸ)ರು ಶುಕ್ರವಾರ ಫಜ್ರ್ ನಮಾಝ್‌ನಲ್ಲಿ ಸಜದ ಮತ್ತು ಅಲ್‌ಇನ್ಸಾನ್ ಓದುತ್ತಿದ್ದರು" (ಬುಖಾರಿ, ಮುಸ್ಲಿಮ್).

**ಸೂರಾಃ ಖಾಫ್:** ಈದ್ ನಮಾಝ್‌ನಲ್ಲಿ ಪ್ರವಾದಿ(ಸ)ರು ಸೂರಾಃ ಖಾಫ್ ಮತ್ತು ಸೂರಾಃ ಅಲ್‌ಖಮರ್ ಓದುತ್ತಿದ್ದರೆಂದು ಅಬೂವಾಖಿದುಲ್ಲೈಸಿ ವರದಿ ಮಾಡಿದ್ದಾರೆ" (ಮುಸ್ಲಿಮ್). ಉಮ್ಮು ಹಿಶಾಂ ಬಿಂತ್ ಅಲ್ ಹಾರಿಸ್ ಎಂಬ ಸಹಾಬಿ ವನಿತೆ ಹೇಳುತ್ತಾರೆ: "ನಾನು ಸೂರಾಃ ಖಾಫ್‌ನ್ನು ಪ್ರವಾದಿ(ಸ)ರ ನಾಲಗೆಯಿಂದಲ್ಲದೆ (ಬೇರಾರಿಂದಲೂ) ಕಲಿಯಿಲ್ಲ. ಪ್ರವಾದಿ(ಸ)ರು ಎಲ್ಲಾ ಶುಕ್ರವಾರವೂ ಅದನ್ನು ಮಿಂಬರ್‌ನಲ್ಲಿ ಓದುತ್ತಿದ್ದರು" (ಬುಖಾರಿ, ಅಬೂದಾವೂದ್).

**ಸೂರಾಃ ಅನ್ನೂರ್:** ಸ್ತ್ರೀಯರಿಗೆ ಸಂಬಂಧಪಟ್ಟ ಬಹಳಷ್ಟು ವಿಷಯಗಳು ಈ ಅಧ್ಯಾಯದಲ್ಲಿರುವುದರಿಂದ ಸ್ತ್ರೀಯರು ಈ ಅಧ್ಯಾಯವನ್ನು ಪ್ರತ್ಯೇಕವಾಗಿ ಕಲಿಯಬೇಕಾಗಿದೆಯೆಂದು ಕೆಲವು ಹದೀಸ್‌ಗಳಲ್ಲಿ ಕಾಣಬಹುದಾಗಿದೆ".

**ಸೂರಾಃ ಅಲ್ ಕಾಫಿರೂನ್:** ಫರ್ವತ್‌ಬ್‌ನು ನೌಫಲ್(ರ)ರವರು ಪ್ರವಾದಿ(ಸ)ರ ಬಳಿಗೆ ತೆರಳಿ ಹೇಳಿದರು - ನಾನು ನಿದ್ರಿಸಲಿಕ್ಕಾಗಿ ಮಲಗುವಾಗ ಏನು ಹೇಳಬೇಕೆಂದು ನನಗೆ ಕಲಿಸಿ ಕೊಡಿರಿ. ಪ್ರವಾದಿ(ಸ)ರು ಹೇಳಿದರು - ನೀನು ಸೂರತ್ತುಲ್ ಕಾಫಿರೂನ್ ಓದು. ಅದು ಶಿರ್ಕ್‌ನ ವಿಮೋಚನೆಯಾಗಿದೆ. ಪ್ರವಾದಿ(ಸ)ರು ಈ ಅಧ್ಯಾಯವನ್ನು ಕುರ್‌ಆನಿನ ನಾಲ್ಕರಲ್ಲೊಂದು ಎಂದು ವರ್ಣಿಸಿದ್ದಾರೆ.

**ಸೂರತ್ತುಲ್ ಇಖ್ಲಾಸ್, ಮುಅವ್ವದತೈನಿ:** ಸೂರತುತ್ತೌಹೀದ್ (ಏಕದೇವ ವಿಶ್ವಾಸ), ಸೂರತ್ತುಲ್ ಅಸಾಸ್ (ತಳಹದಿ), ಸೂರತ್ತುಲ್ ಮಅರಿಫ್(ಜ್ಞಾನ) ಎಂಬೀ ಹೆಸರುಗಳುಳ್ಳ ಸೂರತ್ತು ಇಖ್ಲಾಸ್ ಕುರ್‌ಆನಿನ ಮೂರನೇ ಒಂದಕ್ಕೆ ಸಮಾನವಾಗಿದೆಯೆಂದು ಪ್ರವಾದಿ(ಸ)ರು ಹೇಳಿದ್ದಾರೆ. ಅಬೂದರ್ದಾಅ್(ರ)ರಿಂದ ವರದಿ: "ಪ್ರವಾದಿ(ಸ)ರು ಕೇಳಿದರು - ಒಂದೇ ರಾತ್ರಿಯಲ್ಲಿ ಕುರ್‌ಆನಿನ ಮೂರರಲ್ಲೊಂದು ಭಾಗವನ್ನು ಪಾರಾಯಣ ಮಾಡಲು ನಿಮಗಾಗದೇ? ಅವರು ಹೇಳಿದರು - ಹೇಗೆ? ಪ್ರವಾದಿ(ಸ)ರು ಹೇಳಿದರು - ಕುಲ್‌ಹುವಲ್ಲಾಹು ಅಹದ್ ಕುರ್‌ಆನಿನ ಮೂರರಲ್ಲೊಂದಕ್ಕೆ ಸಮಾನವಾಗಿದೆ" (ಮುಸ್ಲಿಮ್). ಮುಆದುಬ್‌ನು ಅಬ್ದುಲ್ಲ(ರ) ಹೇಳುತ್ತಾರೆ: "ಕತ್ತಲು ಹಾಗೂ ಮಳೆಯಿರುವ ಒಂದು ರಾತ್ರಿ ಪ್ರವಾದಿ(ಸ)ರೊಂದಿಗೆ ನಮಾಝ್ ಮಾಡಲಿಕ್ಕಾಗಿ ನಾವು ಹೊರಟೆವು. ಆಗ ರಸೂಲ್(ಸ)ರು ಹೇಳಿದರು - ನೀವು ಮುಂಜಾನೆ ಮತ್ತು ಸಂಜೆ ಮೂರು ಬಾರಿ ಸೂರತ್ತುಲ್ ಇಖ್ಲಾಸ್ ಹಾಗೂ ಮುಅವ್ವದತೈನಿ(ಅಲ್ ಫಲಕ್, ಅನ್ನಾಸ್) ಓದಿರಿ. ಅದು ಎಲ್ಲದಕ್ಕೂ ಸಾಕಾಗುವಂತಹದಾಗಿದೆ" (ತಿರ್ಮುದಿ).

ಸೂರತು ಇಖ್ಲಾಸ್‌ನಲ್ಲಿರುವ ಸ್ನೇಹವು ಒಬ್ಬರನ್ನು ಸ್ವರ್ಗ ಪ್ರವೇಶಕ್ಕೆ ಅರ್ಹರಾಗಿ ಮಾಡುತ್ತದೆಯೆಂದೂ ಸ್ವರ್ಗದಲ್ಲಿ ಅವನಿಗೆ ಅಲ್ಲಾಹು ಭವ್ಯ ಭವನವನ್ನು ದಯಪಾಲಿಸುವನೆಂದೂ ಕೆಲವು ಹದೀಸ್‌ಗಳಲ್ಲಿ ಕಾಣಬಹುದಾಗಿದೆ. ಕುರ್‌ಆನ್ ಪಾರಾಯಣ, ಅಧ್ಯಯನ ಮತ್ತು ಅದರನುಸಾರವಾದ ಜೀವನವು ಒಂದುಗೂಡಿದಾಗಲೇ ಮೇಲೆ ವಿವರಿಸಲಾದ ಪ್ರತಿಫಲಗಳೆಲ್ಲವೂ ಯಥಾರ್ಥವಾಗುತ್ತವೆ. ●




✍ ಪ್ರೊ ಪಿ. ಅಬ್ದುಲ್ಲ. ಕನ್ನಡಕ್ಕೆ: ಇಬ್ನು ಮೊಹಿದ್ದೀನ್

# ಪ್ರಾಣಿಗಳ ಕೂಗು

## 1. ಕತ್ತೆ, ಸಾಕಿದ ಹುಂಜ:

عن النَّبِي قَالَ: (إذَا سَمِعْتُمْ نُهَاقَ الحَمِيرَ، فَتَعَوَّذُوا بِاللهِ مِنَ الشَّيْطَانِ، فَإنَّهاَ رَأتْ شَيْطَانًا، وَإذَا سَمِعْتُمْ صِيَاحَ الدِّيَكَةِ، فَسَلُوا اللهَ مِنْ فَضْلِهِ، فَإنَّهَا رَأتْ مَلَكًا) (البخاري ومسلم)

ಪ್ರವಾದಿ(ಸ)ರು ಹೇಳಿದರು: "ನೀವು ಕತ್ತೆಗಳ ಅರಚಾಟವನ್ನು ಕೇಳಿದರೆ **أعُوذُ باللهِ مِنَ الشَّيْطَانِ الرَّجِيم** (ಶೈತಾನನಿಂದ ನಾನು ಅಲ್ಲಾನಲ್ಲಿ ರಕ್ಷಣೆ ಬೇಡುತ್ತೇನೆ) ಎಂದು ಹೇಳಿರಿ. ಏಕೆಂದರೆ ಅವುಗಳು ಒಂದು ಶೈತಾನನನ್ನು ಕಂಡಿವೆ. ನೀವು ಸಾಕಿದ ಹುಂಜವು ಕೂಗುವುದನ್ನು ಕೇಳಿದರೆ **اللّٰهُمَّ إنِّي أسْألُكَ مِنْ فَضْلِكَ** (ಅಲ್ಲಾಹ್, ಖಂಡಿತವಾಗಿಯೂ ನಿನ್ನ ಔದಾರ್ಯದಿಂದ ನಾನು ನಿನ್ನೊಡನೆ ಬೇಡುತ್ತೇನೆ) ಎಂದು ಹೇಳಿರಿ, ಏಕೆಂದರೆ ಅದು ಒಂದು ಮಲಕನ್ನು ಕಂಡಿದೆ (ಬುಖಾರಿ, ಮುಸ್ಲಿಮ್).

## 2. ನಾಯಿ, ಕತ್ತೆ:

قَالَ رَسُولُ اللهِ ﷺ إذَا سَمِعْتُمْ نُبَاحَ الكِلاَبِ، وَنَهِيقَ الحَمِيرِ بِاللَّيْلِ، فَتَعَوَّذُوا بِاللهِ مِنْهُنَّ، فَإنَّهُنَّ يَرَيْنَ مَا لاَتَرَوْنَ. (أبوداود)

ಪ್ರವಾದಿ(ಸ)ರು ಹೇಳಿದರು: "ನೀವು ರಾತ್ರಿಯಲ್ಲಿ ನಾಯಿಗಳು ಬೊಗಳುವುದನ್ನು ಅಥವಾ ಕತ್ತೆಗಳ ಕಿರುಚಾಟವನ್ನು ಕೇಳಿದರೆ **أعُوذُ بِاللهِ مِنْهُنَّ** (ಅವುಗಳಿಂದ ನಾನು ಅಲ್ಲಾಹನಲ್ಲಿ ರಕ್ಷಣೆ ಬೇಡುತ್ತೇನೆ) ಎಂದು ಹೇಳಿರಿ. ಏಕೆಂದರೆ ನೀವು ಕಾಣದುದನ್ನು ಅವು ಕಾಣುತ್ತವೆ (ಅಬೂದಾವೂದ್).

# ಮಾನವೇತಿಹಾಸದಲ್ಲಿ ಮೊತ್ತಮೊದಲು ಮೊಳಗಿದ ಪ್ರವಾದಿ(ಸ)ರ ಮಾನವ ಹಕ್ಕುಗಳ ಘೋಷಣೆ

(2ನೇ ಪುಟದಿಂದ)

ಹೀರಿ ಗೌರವಾನ್ವಿತನಾಗಿ ಮೆರೆಯುವ ಸಮಾಜ ಸುಧಾರಕರು ಮತ್ತು ದೇಶದ ಅಗಾಧ ಸಂಪತ್ತನ್ನು ಲೂಟಿ ಮಾಡಿ ಜನನಾಯಕರಾಗಿ ಮೆರೆಯುವ ದೇಶೋದ್ಧಾರಕರು ಅದೆಷ್ಟೋ ಮಂದಿಯಿದ್ದಾರೆ.

ಇಂತಹವರ ವಂಚನೆ ಮತ್ತು ವಿಶ್ವಾಸ ದ್ರೋಹಗಳಿಂದಾಗಿ ದೇಶದೆಲ್ಲೆಡೆ ದಿನನಿತ್ಯ ಮಾನವ ಹಕ್ಕುಗಳ ಧ್ವಂಸಕಾರ್ಯ ನಡೆಯುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ವಿಶ್ವಾಸವಿಟ್ಟು ವಹಿಸಿಕೊಟ್ಟ ವಸ್ತುಗಳಿಗೆ ಒಂದಿಷ್ಟೂ ಲೋಪ ಉಂಟಾಗದ ರೀತಿಯಲ್ಲಿ ಹಿಂತಿರುಗಿಸಬೇಕಾದುದರ ಪ್ರಾಧಾನ್ಯತೆಯ ಕುರಿತಾಗಿದೆ ಪ್ರವಾದಿ(ಸ)ರು ತನ್ನ ವಿದಾಯ ಭಾಷಣದಲ್ಲಿ ಒತ್ತು ಕೊಟ್ಟ ಎರಡನೇಯ ವಿಷಯ. ಪ್ರವಾದಿ(ಸ)ರು ಹೀಗೆ ಹೇಳಿದರು: "ಅಮಾನತ್‌ನ ಸೊತ್ತುಗಳನ್ನಿಟ್ಟುಕೊಂಡವರು ಅದರ ಹಕ್ಕುದಾರರಿಗೆ ಅದನ್ನು ಹಿಂತಿರುಗಿಸಲಿ. ನೀವು ಯಾವುದೇ ಅನ್ಯಾಯ ಮಾಡುವುದಾಗಲಿ, ಅನ್ಯಾಯಕ್ಕೊಳಗಾಗುವುದಾಗಲಿ ಕೂಡದು".

ಸಂಪತ್ತು ವೈಯಕ್ತಿಕ ಹಾಗೂ ಸಾಮಾಜಿಕ ಜೀವನದ ಅಡಿಗಲ್ಲಾಗಿದೆ. ಅದನ್ನು ಜನರೆಡೆಯಲ್ಲಿ ಹೆಚ್ಚು ಅಥವಾ ಕಡಿಮೆಯಾಗಿ ವಿತರಣೆ ಮಾಡಲಾಗಿದೆ. ಅಗತ್ಯದ ಸಂದರ್ಭಗಳಲ್ಲಿ ಉಳ್ಳವನು ಇಲ್ಲದವನಿಗೆ ಕೊಟ್ಟು ಸಹಾಯ ಮಾಡುವುದು ಮಾನವೀಯತೆಯಾಗಿದೆ. ಸಂಪತ್ತಿನ ವ್ಯಾಮೋಹ ಹೆಚ್ಚಿದಂತೆ ಮಾನವೀಯತೆ ಇಲ್ಲದಾಗುತ್ತದೆ. ಹಣ ಬಿಸುಟು ಹಣ ದೋಚುವ ಸುಲಭ ದಾರಿಗಳ ಪೈಕಿ ಬಡ್ಡಿ ವ್ಯವಹಾರ ಪ್ರಮುಖವಾಗಿದೆ. ಅದು ಮನಸ್ಸಿನಿಂದ ಮನುಷ್ಯತ್ವದ ತೇವವನ್ನು ಬತ್ತಿಸುವ ಮಹಾ ಪಾತಕವಾಗಿ ಚಿತ್ರೀಕರಿಸಿದ ಪ್ರವಾದಿ(ಸ)ರು ಬಡ್ಡಿ ವ್ಯವಹಾರಕ್ಕೆ ಅಂಕುಶ ಹಾಕಿ ಆರ್ಥಿಕ ರಂಗದ ಶುದ್ಧೀಕರಣಕ್ಕೆ ನಾಂದಿ ಹಾಕಿದ್ದು ತನ್ನ ಚಿಕ್ಕಪ್ಪನ ಮಗ ಅಬ್ಬಾಸ್‌ಬ್ನು ಅಬ್ದುಲ್ ಮುತ್ತಲಿಬ್‌ರವರ ಮೂಲಕವಾಗಿದೆ. ಬಡ್ಡಿಯ ಉರುಳಿಗೆ ಕೊರಳೊಡ್ಡಿ ಅದೆಷ್ಟೋ ಮಂದಿ ಪ್ರಾಣ ಬಿಡುತ್ತಿರುವ ಆಧುನಿಕ ಜಗತ್ತು ಬಡ್ಡಿ ನಿಷೇಧದ ದೈವಿಕ ನಿಯಮವನ್ನು ತನ್ನ ಕುಟುಂಬದಲ್ಲೇ ಪ್ರಥಮವಾಗಿ ಅನುಷ್ಠಾನಕ್ಕೆ ತಂದ ಪ್ರವಾದಿ ಮುಹಮ್ಮದ್(ಸ)ರ ಆರ್ಥಿಕ ನೀತಿಯ ಅಧ್ಯಯನ ಮಾಡುವುದೊಳಿತು. ಪ್ರವಾದಿ(ಸ)ರ ವಿದಾಯ ಭಾಷಣದಲ್ಲಿ ಬಡ್ಡಿಯನ್ನು ಮಹಾಪರಾಧವಾಗಿ ಘೋಷಿಸಿದ್ದು, ಆಧುನಿಕ ಮನುಷ್ಯನು ಬಡ್ಡಿಯನ್ನು ಮಾನವ ಹಕ್ಕು ಉಲ್ಲಂಘನೆಯ ಯಾವ ಖಾತೆಯಲ್ಲೂ ಸೇರಿಸದಿರುವುದು ಮಾನವ ನಿರ್ಮಿತ ಹಕ್ಕುಗಳ ಪಟ್ಟಿಯ ದೌರ್ಬಲ್ಯವಲ್ಲದೆ ಇನ್ನೇನು?

ಪ್ರವಾದಿ(ಸ)ರ ವಿದಾಯ ಭಾಷಣದ ಪ್ರತಿಯೊಂದು ವಿಷಯವನ್ನು ಪರಿಶೋಧಿಸುವಾಗಲೂ ಆ ಘೋಷಣೆ ಅದೆಷ್ಟು ಮಹತ್ತರವಾದುದೆಂದು ತಿಳಿಯಬಹುದಾಗಿದೆ. ಜಗತ್ತಿನಲ್ಲಿ ಯಾವ ನಾಯಕನೂ ಮಾಡದಂತಹ ಅಪೂರ್ವ ಘೋಷಣೆ. ಮುಸಲ್ಮಾನನ ಜೀವನಕ್ಕೆ ಸಂಪೂರ್ಣ ಮಾರ್ಗದರ್ಶಕವಾಗಿರುವ ಅವನ ವೈಯಕ್ತಿಕ, ಕೌಟುಂಬಿಕ ಮತ್ತು ಸಾಮಾಜಿಕ ವ್ಯವಸ್ಥೆಗಳಿಗೆ ಸಂಬಂಧಪಟ್ಟ ಎಲ್ಲಾ ರೀತಿಯ ವಿಧಿ-ನಿಷೇಧಗಳ ಕುರಿತು ಪ್ರವಾದಿ(ಸ)ರು ಅಂದು ಘೋಷಿಸಿದ್ದರು. ಅರಫಾ ಮೈದಾನದಲ್ಲಿ ಸಮ್ಮೇಳಿಸಿದ ತನ್ನ ಸಹಚರರಲ್ಲಿ ವಿಶ್ವಾಸದಾರ್ಢ್ಯತೆ ಹಾಗೂ ಈಮಾನಿನ ಆವೇಶ ಅಂಕುರಿಸುವಂತೆ ಮಾಡಿದ ಪ್ರವಾದಿ(ಸ)ರವರ ಬಾಯಿಂದ ಹೊರಟ ಮಹದ್ವಚನಗಳು ಮುಸ್ಲಿಮರಿಗೆ ಮಾತ್ರವಲ್ಲ, ವಿಶ್ವವಾಸಿಗಳಿಗೊಂದು ದಾರಿದೀಪವಾಗಿದೆ.

ಇಸ್ಲಾಮಿನ ತಳಹದಿಯಾದ ವಿಶ್ವಾಸ ಕರ್ಮಗಳಲ್ಲಿ ವ್ಯತಿರಿಕ್ತತೆಯುಂಟು ಮಾಡುವ ಶೈತಾನನ ಬಗ್ಗೆ ಜಾಗೃತರಾಗಿರಬೇಕು. ಪತ್ನಿಯರೊಂದಿಗೆ ಗೌರವದಿಂದ ವರ್ತಿಸಬೇಕು ಮತ್ತು ಪತ್ನಿಯರು ಒಂದು ಅಮಾನತ್ತಾಗಿದ್ದು ಅವರನ್ನು ಸಂರಕ್ಷಿಸಬೇಕು ಎಂದು ಕರೆ ನೀಡಿದ ಪ್ರವಾದಿ(ಸ)ರ ಉಪದೇಶಗಳು ವಾಸ್ತವದಲ್ಲಿ ಅದುವರೆಗೆ ತುಳಿಯಲ್ಪಟ್ಟಿದ್ದ ಸ್ತ್ರೀ ಸಮೂಹದ ವಿಮೋಚನಾ ಸಂದೇಶವಾಗಿತ್ತು. ಸ್ತ್ರೀಯರು ಪುರುಷರ ಕೈಕೆಳಗಿನ ಗುಲಾಮರಲ್ಲ, ಅವರಿಗೂ ಸಮಾನ ಹಕ್ಕುಗಳಿವೆಯೆಂದು ಪ್ರವಾದಿ(ಸ)ರು ಪುರುಷ ಸಮೂಹಕ್ಕೆ ತಾಕೀದು ನೀಡಿದರು. ನಿಮ್ಮ ಆಶ್ರಯದಲ್ಲಿರುವವರೊಂದಿಗೆ ಸಹ ಗೌರವದಿಂದ ವರ್ತಿಸಬೇಕು. ಅವರಿಗೂ ನಿಮ್ಮ ಆಹಾರದಂತೆಯೇ ಆಹಾರ, ಬಟ್ಟೆಬರೆ ಒದಗಿಸಬೇಕು ಎಂದು ಆದೇಶಿಸಿದ ಪ್ರವಾದಿ(ಸ)ರಂತಹ ಇನ್ನೊಬ್ಬ ನಾಯಕ ಜಗತ್ತಿನಲ್ಲಿ ಯಾರಾದರೂ ಇದ್ದಾರೆಯೇ?

ಇಸ್ಲಾಮ್ ಧರ್ಮದ ಎರಡು ಪ್ರಮಾಣಗಳಾದ ಕುರ್‌ಆನ್ ಹಾಗೂ ಪ್ರವಾದೀ ಸುನ್ನತ್ತುಗಳನ್ನು ಬಿಗಿಯಾಗಿ ಹಿಡಿದು ಜೀವನದ ಬೆಳಕನ್ನಾಗಿ ಮಾಡಿಕೊಂಡರೆ ಯಶಸ್ಸು ಖಂಡಿತ. ಪಥಭ್ರಷ್ಟತೆಗೆ ಅವಕಾಶವುಂಟಾಗದೆಂದು ಪ್ರವಾದಿ(ಸ)ರು ಉಪದೇಶಿಸಿದರು. ಮಾನವ ಸೌಹಾರ್ದದ ಮಹಾನ್ ಸಂದೇಶದೊಂದಿಗೆ ಆ ಮಹಾನ್ ಪ್ರವಾದಿ(ಸ)ರು ತನ್ನ ಮಾತುಗಳಿಗೆ ವಿರಾಮವಿಟ್ಟರು. ಸುಶಕ್ತ ಸಾಮಾಜಿಕ ವಾತಾವರಣಕ್ಕೆ ಸಮಾನ ನ್ಯಾಯ ಮತ್ತು ಸಮಾನತೆಯ ಅಗತ್ಯವಿದೆ. ಪ್ರಭು ಮತ್ತು ಪ್ರಜೆ, ನಾಯಕ ಮತ್ತು ಅನುಯಾಯಿ, ಮಾಲಕ ಮತ್ತು ಸೇವಕ, ಶಕ್ತ ಮತ್ತು ಅಶಕ್ತ, ಧನಿಕ ಮತ್ತು ದರಿದ್ರ, ಮೇಲಧಿಕಾರಿ ಮತ್ತು ಕೆಳ ಅಧಿಕಾರಿ ಮುಂತಾದವರುಳ್ಳ ಸಮಾಜದಲ್ಲಿ ಸಮಾನ ಅವಕಾಶವೆಂಬುದು ಹೆಚ್ಚು ಪ್ರಾಮುಖ್ಯತೆಯಿರುವ ವಿಷಯವಾಗಿದೆ. ಮಾನವರ ಮಧ್ಯೆ ಎದ್ದು ಕಾಣುವ ದೇಶ, ಭಾಷೆ, ವರ್ಣ, ವರ್ಗ, ಕುಲ, ಗೋತ್ರಗಳೆಂಬ ಮೇರೆಗಳು ಮಾನವರನ್ನು ಪರಸ್ಪರ ಬೇರ್ಪಡಿಸುವ ಗೋಡೆಗಳಾಗಬಾರದೆಂದು ಇಸ್ಲಾಮ್ ಪ್ರತಿಪಾದಿಸುತ್ತದೆ. ಮಾನವ ಸಮಾನತೆ ಹಾಗೂ ಸಾಮಾಜಿಕ ನ್ಯಾಯದ ಮಹತ್ತರ ಸಂದೇಶವನ್ನು ಬಿತ್ತರಿಸಿದ ಪ್ರವಾದಿ ಮುಹಮ್ಮದ್(ಸ)ರ ಐತಿಹಾಸಿಕ ವಿದಾಯ ಭಾಷಣದ ಸಾರ ಇಸ್ಲಾಮೀ ಸಾಮಾಜಿಕ ಜೀವನದಲ್ಲಿ ಪ್ರಕಟವಾಗುತ್ತಿದ್ದರೂ ಪವಿತ್ರ ಹಜ್ಜ್‌ನಲ್ಲಿ ಅದರ ಪ್ರಾಯೋಗಿಕ ರೂಪ ಪೂರ್ಣವಾಗಿ ಕಾಣಬಹುದಾಗಿದೆ. ●

# ಧಾರ್ಮಿಕ ಪ್ರಶ್ನೋತ್ತರಗಳು

## ಇದ್ದಾವಧಿಯಲ್ಲಿ ನೌಕರಿ?

ಪ್ರ: ಗಂಡನ ನಿಧನದ ಹಿನ್ನೆಲೆಯಲ್ಲಿ ಇದ್ದ ಆಚರಿಸುವ ಮಹಿಳೆ ಒಂದು ವೇಳೆ ಆರ್ಥಿಕ ಸಮಸ್ಯೆ ಎದುರಿಸುತ್ತಿದ್ದರೆ ತನ್ನ ಜೀವನ ನಿರ್ವಹಣೆಗಾಗಿ ಹೊರಗಡೆ ದುಡಿಯಲು ಹೋಗಬಹುದೇ?

ಉ: ಇದ್ದಾವಧಿಯಲ್ಲಿ ಆಕೆ ತನ್ನ ಜೀವನ ನಿರ್ವಹಿಸಲಾಗದೆ ಆರ್ಥಿಕ ಅಡಚಣೆ ಎದುರಿಸುತ್ತಿದ್ದರೆ ದುಡಿಮೆಯ ಅಗತ್ಯಕ್ಕಾಗಿ ಮನೆ ಬಿಟ್ಟು ಹೊರ ಹೋಗಬಹುದಾಗಿದೆ.

ಜಾಬಿರ್(ರ) ಹೇಳುತ್ತಾರೆ: "ವಿವಾಹ ವಿಚ್ಛೇದನೆಗೊಳಗಾದ ನನ್ನ ಚಿಕ್ಕಮ್ಮ ತನ್ನ ಜೀವನ ನಿರ್ವಹಣೆಗಾಗಿ ಇದ್ದದ ಅವಧಿಯಲ್ಲಿ ಖರ್ಜೂರದ ತೋಟಕ್ಕೆ ಕೆಲಸ ಮಾಡಲು ಹೋಗುತ್ತಿದ್ದರು. ಕೆಲವರು ಅದನ್ನು ವಿರೋಧಿಸಿ ಆಕೆಯನ್ನು ತಡೆಯಲು ಯತ್ನಿಸಿದಾಗ ಅವರು (ಚಿಕ್ಕಮ್ಮ) ಪ್ರವಾದಿ(ಸ)ರವರ ಬಳಿ ಬಂದು ಈ ಬಗ್ಗೆ ವಿಚಾರಿಸಿದರು. ಅಲ್ಲಾಹನ ಸಂದೇಶ ವಾಹಕ(ಸ)ರು ತಾನು ಮಾಡತ್ತಿರುವ ಕೆಲಸವನ್ನು ಮುಂದು ವರಿಸುವಂತೆ ಆಕೆಗೆ ಸೂಚಿಸಿದರು. (ಸಹೀಹ್ ಮುಸ್ಲಿಮ್)

ಉಹ್ದ್ ಯುದ್ಧದಲ್ಲಿ ಪತಿಯನ್ನು ಕಳೆದುಕೊಂಡ ಅನೇಕ ಮಹಿಳೆಯರು ತಾವು ಮನೆಯಲ್ಲಿ ಏಕಾಂಗಿತನ ಅನುಭವಿಸುತ್ತಿರುವುದಾಗಿಯೂ ಪರಸ್ಪರ ಭೇಟಿಯಾಗಲು ಬಯಸುತ್ತಿರುವುದಾಗಿಯೂ ಪ್ರವಾದಿ(ಸ)ರವರಲ್ಲಿ ಹೇಳಿದಾಗ ರಾತ್ರಿ ಹೊತ್ತು ಮನೆಯಲ್ಲಿ ತಂಗುವಂತೆ ಆದೇಶಿಸಿ ಪ್ರವಾದಿ(ಸ)ರು ಅವರಿಗೆ ಅನುಮತಿ ನೀಡಿದರು. (ನೈಲುಲ್ ಅವ್‌ತಾರ್)

**-ಶೈಖ್ ಮಹ್‌ಮೂದ್ ಅಹ್ಮದ್ ಕಾಶ್ಮೀರಿ**

## ಬ್ಯಾಂಕ್‌ಗೆ ಕಟ್ಟಡ ಬಾಡಿಗೆಗೆ ಕೊಡುವುದು

ಪ್ರ: ನನಗೆ ಅಲ್ಲಾಹು ಧಾರಾಳ ಸಂಪತ್ತು ನೀಡಿದ್ದಾನೆ. ಬೃಹತ್ತಾದ ವಾಣಿಜ್ಯ ಸಮುಚ್ಚಯ ಹಾಗೂ ಕಟ್ಟಡಗಳಿದ್ದು ಅದರಲ್ಲಿ ಶಿಕ್ಷಣ ಸಂಸ್ಥೆ, ಜ್ಯುವೆಲ್ಲರಿ, ಹೊಟೇಲ್, ಮೊಬೈಲ್ ಶಾಪ್, ಟ್ರಾವೆಲ್ಸ್ ಏಜೆನ್ಸಿ, ಶಾದಿ ಮಹಲ್‌ಗಳು ಕಾರ್ಯಾಚರಿಸುತ್ತಿವೆ. ಇತ್ತೀಚೆಗೆ ಕೆಲವು ಅಧಿಕಾರಿಗಳು ನನ್ನನ್ನು ಭೇಟಿ ಮಾಡಿ ಬ್ಯಾಂಕ್ ವ್ಯವಹಾರ ನಡೆಸಲು ಕೊಠಡಿಯೊಂದನ್ನು ಬಾಡಿಗೆ ನೀಡುವಂತೆ ಕೇಳಿಕೊಂಡಿದ್ದಾರೆ. ಬ್ಯಾಂಕ್‌ಗೆ ಕಟ್ಟಡ ಬಾಡಿಗೆ ಕೊಡಬಹುದೇ? ಇಸ್ಲಾಮ್ ಏನೆನ್ನುತ್ತದೆ?

ಉ: ಪ್ರಸ್ತುತ ಕಟ್ಟಡವನ್ನು ಇಸ್ಲಾಮ್ ನಿಷೇಧಿಸಿದ ಬಡ್ಡಿ ವ್ಯವಹಾರ ನಡೆಸಲಿರುವ ಬ್ಯಾಂಕ್‌ಗಾಗಿ ಬಾಡಿಗೆಗೆ ಕೊಡುವುದು ಧರ್ಮಬದ್ಧವಲ್ಲ. ಏಕೆಂದರೆ ಇದು ಕೆಡುಕು ಹಾಗೂ ಅಧರ್ಮದ ಕಾರ್ಯಗಳಿಗೆ ಸಹಕರಿಸಿದಂತಾಗುತ್ತದೆ. ಅಲ್ಲಾಹು ಹೇಳುತ್ತಾನೆ: "ನೀವು ಒಳಿತು ಹಾಗೂ ಭಕ್ತಿಯ ವಿಚಾರದಲ್ಲಿ ಪರಸ್ಪರ ಸಹಾಯ ಮಾಡಿರಿ. ಆದರೆ ಕೆಡುಕು ಹಾಗೂ ಅತಿಕ್ರಮದಲ್ಲಿ ಸಹಕರಿಸಬೇಡಿರಿ. (ಅಧ್ಯಾಯ 5:2)

## ಹೆತ್ತವರಿಗಾಗಿ ಗಡ್ಡ ಬೋಳಿಸುವುದು

ಪ್ರ: ನಾನು ಗಡ್ಡ ಬಿಟ್ಟಿರುವುದಕ್ಕೆ ನನ್ನ ಹೆತ್ತವರು ತೀವ್ರ ಆಕ್ಷೇಪ ವ್ಯಕ್ತ ಪಡಿಸುತ್ತಿದ್ದಾರೆ. ಅವರಿಗೆ ನಾನು ಗಡ್ಡ ಬಿಡುವುದು ಇಷ್ಟವಿಲ್ಲ. ನಿತ್ಯವೂ ನನ್ನನ್ನು ಬೈಯ್ಯುತ್ತಿರುತ್ತಾರೆ. ನಮಾಝ್‌ಗಾಗಿ ಮಸೀದಿಗೆ ಹೋಗಲೂ ಬಿಡುತ್ತಿಲ್ಲ, "ನೀನು ನಮ್ಮ ಮಾತು ಕೇಳುತ್ತಿಲ್ಲವಲ್ಲ, ಅಲ್ಲಾಹ್ ನಿನ್ನ ಪ್ರಾರ್ಥನೆಗೆ ಉತ್ತರಿಸಲಾರ" ಎಂದು ಗದರಿಸುತ್ತಾರೆ. ಹೀಗಿರುವಾಗ ನಾನು ಗಡ್ಡ ಬೋಳಿಸಿ ನನ್ನ ಹೆತ್ತವರನ್ನು ಅನುಸರಿಸಿದರೆ ತಪ್ಪಾಗುತ್ತದೆಯೇ? ಮಾರ್ಗದರ್ಶನ ನೀಡಿ.

ಉ: ಗಡ್ಡ ಬೆಳೆಸುವುದು ಪ್ರವಾದಿಚರ್ಯೆ. ಅನೇಕ ಸಹೀಹ್ ಆದ ಹದೀಸ್‌ಗಳು ಗಡ್ಡ ಬೆಳೆಸುವಂತೆ ಆದೇಶಿಸಿದ್ದು ಅವುಗಳ ಆಧಾರದಲ್ಲಿ ಪೂರ್ವಿಕ ಇಮಾಮ್‌ಗಳೆಲ್ಲರೂ ಗಡ್ಡ ಬೋಳಿಸುವುದು ನಿಷಿದ್ಧ ಎಂದು ಅಭಿಪ್ರಾಯ ಪಟ್ಟಿದ್ದಾರೆ. ದಪ್ಪ ಮೀಸೆ ಹಾಗೂ ಗಡ್ಡ ಬೋಳಿಸಿದ್ದ ಪರ್ಶಿಯಾ ದೊರೆಯ ಇಬ್ಬರು ಪ್ರತಿನಿಧಿಗಳು ಪ್ರವಾದಿ(ಸ)ರವರ ಬಳಿಗೆ ಬಂದಾಗ "ನಿಮ್ಮನ್ನು ಹೀಗೆ ಮಾಡಲು ಯಾರು ಹೇಳಿದರು" ಎಂದು ಪ್ರವಾದಿ(ಸ)ರವರು ಕೇಳಿದರು. ಆಗ ಅವರು "ನಮ್ಮ ಪ್ರಭು(ರಾಜ)" ಎಂದುತ್ತರಿಸಿದರು. ಪ್ರವಾದಿ(ಸ)ರು ಅವರೊಂದಿಗೆ "ನನ್ನ ಪ್ರಭು (ಅಲ್ಲಾಹ್) ಗಡ್ಡ ಬೆಳೆಸುವಂತೆಯೂ ಮೀಸೆ ಕತ್ತರಿಸಿ ಒಪ್ಪಓರಣಗೊಳಿಸುವಂತೆಯೂ ನನಗೆ ಆದೇಶಿಸಿರುವನು" ಎಂದು ಹೇಳಿದರು.

(ತಬಖಾತ್ ಇಬ್ನ್ ಸಅ್‌ದ್ ಭಾಗ 1, ಪುಟ 147)

ಈ ವರದಿಯಲ್ಲಿ ಗಡ್ಡ ಬೆಳೆಸುವಂತೆ ಆದೇಶ ನೀಡಿರುವುದು ಸ್ವತಃ ಅಲ್ಲಾಹನೇ ಎಂದು ಪ್ರವಾದಿ(ಸ) ಸ್ಪಷ್ಟ ಪಡಿಸಿದ್ದಾರೆ. ಸೃಷ್ಟಿಕರ್ತನ ಅನುಸರಣೆಗೆ ಹೆತ್ತವರ ಅನುಸರಣೆಗಿಂತ ಆದ್ಯತೆ ಕೊಡಬೇಕು ಎಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ.

ತಂದೆ ತಾಯಿಗಳಿರಲಿ, ಇತರರಿರಲಿ, ಅವರು ಹೇಳುತ್ತಿರುವ ವಿಚಾರ ಧರ್ಮಬದ್ಧವಾಗಿದ್ದರೆ ಮಾತ್ರ ಅನುಸರಿಸಬೇಕು.

ನೀವು ಗಡ್ಡ ಬೆಳೆಸಿರುವುದನ್ನು ಧಾರ್ಮಿಕ ದೃಷ್ಟಿಯಿಂದ ನಿಮ್ಮ ಹೆತ್ತವರು ವಿರೋಧಿಸಿರಲಿಕ್ಕಿಲ್ಲ, ಜಾಗತಿಕ ಮಟ್ಟದಲ್ಲಿ ಕೆಲವು ಗಡ್ಡಧಾರಿ(ನಾಮಧಾರಿ ಮುಸ್ಲಿಮರು)ಗಳು ಸಮಾಜದ ಸ್ವಾಸ್ಥ್ಯ ಕೆಡಿಸುವ ಧರ್ಮಬಾಹಿರ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿರುವುದನ್ನು ಕಂಡು ನಿಮ್ಮೊಂದಿಗಿನ ಸ್ನೇಹದಿಂದ ಹಾಗೆ ಉಪದೇಶಿಸಿರಬಹುದು. ನೀವು ನಿಮ್ಮ ಹೆತ್ತವರಿಗೆ ಇಸ್ಲಾಮ್ ಧರ್ಮದ ಶಾಂತಿ ಸಾಮರಸ್ಯದ ಕುರಿತು ತಿಳಿಹೇಳಿ.

ಪ್ರವಾದಿ(ಸ)ರವರನ್ನು ಪ್ರೀತಿಸುವ ಮತ್ತು ಅವರ ಜೀವನ ಚರ್ಯೆಯನ್ನು ಪರಿಪಾಲಿಸುವ ಯಥಾರ್ಥ ಸತ್ಯವಿಶ್ವಾಸಿಗಳಾರೂ ಅಂತಹ ಸಮಾಜಬಾಹಿರ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಸಾಧ್ಯವಿಲ್ಲ ಎಂಬುದನ್ನು ವಿವರಿಸಿಕೊಡಿ.

ಹೆತ್ತವರ ಮಾತು ಕೇಳಿ ಗಡ್ಡ ಬೋಳಿಸದೆ ನೀವು ಸತ್ಯಪಥದಲ್ಲಿ ದೃಢವಾಗಿ ನಿಂತರೆ ಅಲ್ಲಾಹನ ಸಹಾಯ ನಿಮಗೆ ಇದ್ದೇ ಇರುತ್ತದೆ.

ಅಲ್ಲಾಹು ಹೇಳುತ್ತಾನೆ: "ಯಾರಾದರೂ ಅಲ್ಲಾಹನನ್ನು ಭಯಪಟ್ಟು ಬದುಕಿದರೆ ಅಂತಹವರಿಗೆ ಪರಿಹಾರ ಮಾರ್ಗವನ್ನು ಅಲ್ಲಾಹು ತೋರಿಸಿ ಕೊಡುವನು ಮತ್ತು ಅವರು ಊಹಿಸದ ರೀತಿಯಲ್ಲಿ ಅವರಿಗೆ ಜೀವನ ಮಾರ್ಗವನ್ನು ಒದಗಿಸಿ ಕೊಡುವನು. (65:2) ಶೈಖ್ ಸಾಲಿಹ್ ಉಸೈಮೀನ್(ರ) ಹೇಳುತ್ತಾರೆ: "ಸೃಷ್ಟಿಗಳ ಸಂತೃಪ್ತಿಗಿಂತ ಸೃಷ್ಟಿಕರ್ತನ ಸಂತೃಪ್ತಿಗೆ ಆದ್ಯತೆ ಕೊಡಬೇಕು. ಆದುದರಿಂದ ನೀವು ಹೆತ್ತವರಿಗೆ ಈ ಬಗ್ಗೆ ಸರಿಯಾದ ಮಾಹಿತಿ ನೀಡಿ ಅವರ ಸೇವೆ ಮಾಡಿ, ಅಲ್ಲಾಹು ಅನುಗ್ರಹಿಸಲಿ.

## ಬಾಕಿ ಹಣ ಇಟ್ಟುಕೊಳ್ಳುವುದು

ಪ್ರ: ನನ್ನ ತಂದೆ ಮನೆಗೆ ಬೇಕಾದ ಸಾಮಾನು (ಹಾಲು, ಮೊಟ್ಟೆ, ತರಕಾರಿ ಇತ್ಯಾದಿ) ಖರೀದಿಸಲು ಹಣ ಕೊಟ್ಟು ನನ್ನನ್ನು ಪೇಟೆಗೆ ಕಳುಹಿಸುತ್ತಿರುತ್ತಾರೆ. ಅಗತ್ಯ ವಸ್ತುಗಳಿಗೆ ವೆಚ್ಚವಾದ ಮೊತ್ತವನ್ನು ಹೊರತು ಪಡಿಸಿ ಬಾಕಿ ಬರುವ ಹಣವನ್ನು ತಂದೆಯ ಅನುಮತಿ ಇಲ್ಲದೆ ನಾನು ನನ್ನಲ್ಲೇ ಇಟ್ಟುಕೊಳ್ಳುವುದು ಧರ್ಮಬದ್ಧವೇ?

ಉ: ಸಾಮಾನು ಖರೀದಿಸಿ ಉಳಿದ ಹಣವನ್ನು ತಂದೆಯ ಅನುಮತಿ ಇಲ್ಲದೆ ನೀವು ಇಟ್ಟುಕೊಳ್ಳಬಾರದು. ನೀವು ಅದನ್ನು ಹಿಂತಿರುಗಿಸಬೇಕಾದುದು ಕಡ್ಡಾಯ. ಇದು ಸತ್ಯಸಂಧತೆ ಮತ್ತು ಪ್ರಾಮಾಣಿಕತೆಯ ಲಕ್ಷಣ. ವಿಶ್ವಾಸದಿಂದ ಪಡೆದ ವಸ್ತುವನ್ನು ಅದರ ಹಕ್ಕುದಾರರಿಗೆ ಮರಳಿಸುವಂತೆ ಅಲ್ಲಾಹು ಪವಿತ್ರ ಕುರ್‌ಆನಿನಲ್ಲಿ ಹೇಳಿರುವನು.

**-ಶೈಖ್ ಅಬ್ದುಲ್ ಅಝೀಝ್ ಬಿನ್ ಬಾಝ್**

# ಪವಿತ್ರ ಹಜ್ಜ್ ಕರ್ಮಗಳ ಸ್ಥೂಲ ಚಿತ್ರಣ

(7ನೇ ಪುಟಕ್ಕೆ)

"ತಮತ್ತುಅ್"ನ ಉಮ್ರಾದ ಕುರಿತಾಗಿದೆ.

**ಆರು:** ತಮತ್ತುಅ್ (ಆರಾಮದಲ್ಲಿರುವುದು) ಮಾಡುವವರು ತಮಗೆ ಮಧ್ಯದಲ್ಲಿ ಸಿಗುವ ಸೌಕರ್ಯಗಳಿಗೆ ಬದಲಾಗಿ ಅನುಕೂಲಕರವಾದ ಒಂದು ಬಲಿಯನ್ನು ಕೊಡಬೇಕು. ಅದಕ್ಕೆ ಸಾಧ್ಯವಾಗದವರು ಹತ್ತು ದಿನಗಳ ಉಪವಾಸ ವ್ರತವನ್ನಾಚರಿಸಬೇಕು. ಈ ಪೈಕಿ ಮೂರು ವ್ರತಗಳನ್ನು ಹಜ್ಜ್‌ನ ದಿನಗಳಲ್ಲಿ ಅಥವಾ ದುಲ್‌ಹಜ್ಜ್ ಹತ್ತಕ್ಕಿಂತ ಮೊದಲು ಮುಗಿಸಬೇಕು. ಉಳಿದವುಗಳನ್ನು ಊರಿಗೆ ಮರಳಿದ ಬಳಿಕ ಪೂರ್ಣಗೊಳಿಸಬೇಕು. ಆದರೆ ತಮತ್ತುಅ್‌ನ ಸೌಕರ್ಯ ಹರಮ್ ನಿವಾಸಿಗಳಿಗಿರುವುದಿಲ್ಲ. ಆದ್ದರಿಂದ ಆ ಬಗೆಗಿನ ಪ್ರಾಯಶ್ಚಿತ್ತವೂ ಅವರಿಗೆ ಅನ್ವಯಿಸುವುದಿಲ್ಲ.

ಮೇಲೆ ಪ್ರಸ್ತಾಪಿಸಿದ ಪ್ರತಿಯೊಂದರ ಕುರಿತು ಹೆಚ್ಚಿನ ವಿವರಣೆಗಳು ಬೇಕಿದ್ದರೆ ಹಜ್ಜ್‌ನ ಕರ್ಮಗಳ ಕುರಿತಾದ ಪುಸ್ತಕಗಳನ್ನು ಓದಿ ತಿಳಿದುಕೊಳ್ಳಬೇಕು. ಪ್ರಸ್ತುತ ಆಯತ್ತ್‌ನ ಕೊನೆಯ ಭಾಗವನ್ನು ಪ್ರತ್ಯೇಕವಾಗಿ ಗಮನಿಸಿರಿ. ಎಲ್ಲಾ ಕರ್ಮಗಳನ್ನು ಯಥಾವತ್ತಾಗಿಯೂ ಭಕ್ತಿ ನಿರ್ಭರವಾಗಿಯೂ ನಿರ್ವಹಿಸಬೇಕು. ಅಲ್ಲಾಹನ ಸಂಪ್ರೀತಿ ಮತ್ತು ಪ್ರತಿಫಲಗಳ ಆಕಾಂಕ್ಷೆ ಮಾತ್ರವೇ ಇರತಕ್ಕದ್ದು. ಅಲ್ಲದಿದ್ದರೆ ಅಲ್ಲಾಹನ ಶಿಕ್ಷಾ ಕ್ರಮಗಳ ಕುರಿತು ಭಯ ಪಡಬೇಕೆಂದು ಮೇಲಿನ ಸೂಕ್ತವು ಸೂಚಿಸುತ್ತದೆ.

## ಎಸ್.ಕೆ.ಎಸ್.ಎಮ್. ವತಿಯಿಂದ ಹಜ್ಜ್ ತರಬೇತಿ ಶಿಬಿರ



ಮಂಗಳೂರು: ಪವಿತ್ರ ಹಜ್ಜ್‌ಗಾಗಿ ತೆರಳುತ್ತಿರುವ ಯಾತ್ರಿಕರಿಗಾಗಿ ಸೌತ್ ಕರ್ನಾಟಕ ಸಲಫಿ ಮೂವ್‌ಮೆಂಟ್‌ನ ವತಿಯಿಂದ ಕಂಕನಾಡಿಯ ಸಲಫಿ ಸೆಂಟರ್‌ನಲ್ಲಿ ಹಜ್ಜ್ ತರಬೇತಿ ಶಿಬಿರವನ್ನು ಆಯೋಜಿಸಲಾಗಿತ್ತು. ಪ್ರಸಿದ್ಧ ವಾಗ್ಮಿ ಮೌಲವಿ ನಾಸೀರುದ್ದೀನ್ ರಹ್ಮಾನಿಯವರು ಕುರ್‌ಆನ್ ಹಾಗೂ ಸುನ್ನತ್‌ಗಳ ಆಧಾರದಲ್ಲಿ ಹಜ್ಜ್‌ನ ವಿಧಿ-ವಿಧಾನಗಳನ್ನು ಕ್ಲಿಪ್ಪಿಂಗ್ ಸಹಿತ ವಿವರಿಸಿದರು.

ಸಲಫಿ ಮೂವ್‌ಮೆಂಟ್‌ನ ಪ್ರಧಾನ ಕಾರ್ಯದರ್ಶಿ ಬಶೀರ್ ಅಹ್ಮದ್ ಶಾಲಿಮಾರ್, ಉಪಾಧ್ಯಕ್ಷ ಅಬೂಬಕರ್ ಪಾಂಡೇಶ್ವರ, ದಅ್‌ವಾ ಕಾರ್ಯದರ್ಶಿ ಇಸ್ಮಾಯೀಲ್ ಶಾಫಿ, ಎಂ.ಜಿ. ಮುಹಮ್ಮದ್, ಕೆ.ಎಂ. ಹನೀಫ್, ಹಿರಿಯ ಸಲಫಿ ಮುಖಂಡ ಯು.ಎನ್. ಅಬ್ದುಲ್ ರಝಾಕ್ ಮುಂತಾದವರು ಉಪಸ್ಥಿತರಿದ್ದರು.

# ಸೌತ್ ಕರ್ನಾಟಕ ಸಲಫಿ ಮೂವ್‌ಮೆಂಟ್(ರಿ.), ಮಂಗಳೂರು

# ಸಾಂವಿಧಾನಿಕ ಪುನಃಶ್ಚೇತನ

ಸೌತ್ ಕರ್ನಾಟಕ ಸಲಫಿ ಮೂವ್‌ಮೆಂಟ್(ರಿ.), ಸಂಸ್ಥೆಯು ಮಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟು, ದಿನಾಂಕ 04-05-2002 ರಂದು ರಿಜಿಸ್ಟ್ರೇಶನ್ ಸಂಖ್ಯೆ: 6/2002-03ನೇ ಸಂಸ್ಥೆಯಾಗಿ ಕರ್ನಾಟಕ ಸೊಸೈಟೀಸ್ ರಿಜಿಸ್ಟ್ರೇಶನ್ ಕಾಯಿದೆ 1960ರಂತೆ ನೋಂದಾಯಿಸಲ್ಪಟ್ಟಿದೆ.

ಸಂಸ್ಥೆಯು ದಕ್ಷಿಣ ಕನ್ನಡ, ಉಡುಪಿ, ಕೊಡಗು, ಚಿಕ್ಕ ಮಗಳೂರು ಜಿಲ್ಲೆಗಳಲ್ಲಿ 65 ಘಟಕಗಳನ್ನು ಸಂಘಟಿಸಿರುತ್ತದೆ. ಚೊಕ್ಕಬೆಟ್ಟು, ತಲಪಾಡಿ, ದೇರಳಕಟ್ಟೆ, ಮಲಾರ್, ಕುದ್ರೋಳಿ, ಅಳೇಕಲ, ಸೂರಲ್‌ಪಾಡಿ, ಕಣ್ಣೂರು, ಬೋಳಂತೂರು, ಕೋಣಾಜೆ, ಕುಂದಾಪುರ, ನಂದಾವರ, ಹಂಡೇಲು, ಅಬ್ಬೆಟ್ಟು, ಸಾಲೆತ್ತೂರು, ಉಪ್ಪಿನಂಗಡಿ, ಮೂಲ್ಕಿ, ಕುಂಜತ್ತ್‌ಬೈಲ್, ಮುಕ್ಕಚ್ಚೇರಿ, ಪುತ್ತೂರು ಮುಂತಾದೆಡೆಗಳಲ್ಲಿ 28 ಮಸೀದಿಗಳನ್ನು ಹೊಂದಿರುತ್ತದೆ.

ಮಂಗಳೂರು ನಗರದ ನೆಲ್ಲಿಕಾಯಿ ರಸ್ತೆಯಲ್ಲಿರುವ ಪಾಲಿಮಾರ್ ಕಟ್ಟಡದ ಒಂದನೇ ಮಹಡಿಯಲ್ಲಿ ಮುಖ್ಯ ಕಛೇರಿಯನ್ನು ಹೊಂದಿದೆ. ಕಂಕನಾಡಿಯಲ್ಲಿಯೂ ಕಂಕನಾಡಿ ಘಟಕದ ಕಛೇರಿಯನ್ನು ಹೊಂದಿದೆ.

ಸಂಸ್ಥೆಯು ಸಲಫಿ ಗರ್ಲ್ಸ್ ಎಂಡ್ ವಿಮೆನ್ಸ್ ಮೂವ್‌ಮೆಂಟ್, ಸಲಫಿ ಸ್ಟೂಡೆಂಟ್ಸ್ ಮೂವ್‌ಮೆಂಟ್, ಸಲಫಿ ವಿದ್ಯಾ ಮಂಡಳಿಗಳೆಂಬ ಮೂರು ಅಂಗ ಸಂಸ್ಥೆಗಳನ್ನು ಹೊಂದಿದ್ದು ಸಲಫಿ ಮತ್ತು ಸಲಫಿಯೇತರ ಮಹಿಳೆಯರ, ವಿದ್ಯಾರ್ಥಿ ವಿದ್ಯಾರ್ಥಿನಿಯರ ಹಿತ ಸಾಧನೆಗಾಗಿ ಕೆಲಸ ಮಾಡುತ್ತಿದೆ. ಸಲಫಿ ವಿದ್ಯಾ ಮಂಡಳಿಯ ಮುಖೇನ ಟ್ಯೂಶನ್ ಕ್ಲಾಸ್, ಅರೆಬಿಕ್ ಮದರಸಗಳನ್ನು ನಡೆಸಲಾತ್ತಿದೆ.

ಸಂಸ್ಥೆಯು ಈಗಿನ ಕಾಲ ಸ್ಥಿತಿಗೆ ಅನುಗುಣವಾಗುವಂತೆ ದ.ಕ. ಮತ್ತು ಉಡುಪಿ ಜಿಲ್ಲೆಗಳ ನೋಂದಾಯಿತ ಸಂಘ ಸಂಸ್ಥೆಗಳ ಒಕ್ಕೂಟ, ಮಂಗಳೂರು(ರಿ.) ಇದರ ಕಾರ್ಯದರ್ಶಿ ಯಂ. ಜಯಾನಂದ ದೇವಾಡಿಗ ಇವರ ಸಹಕಾರದಿಂದ ಜ್ಞಾಪಕ ಪತ್ರ ಮತ್ತು ಕ್ರಮ ನಿಬಂಧನೆಗಳನ್ನು ಸಮಗ್ರ ತಿದ್ದುಪಡಿಗೊಳಿಸಿ ಹೊಸತಾಗಿ ಜ್ಞಾಪಕ ಪತ್ರ ಮತ್ತು ಕ್ರಮ ನಿಬಂಧನೆಗಳನ್ನು ರಚಿಸಿರುತ್ತದೆ. ಸಂಸ್ಥೆಯ 396 ಮಂದಿ ಸದಸ್ಯರುಗಳಿಗೆ ಕಾನೂನುಬದ್ಧ ನೋಟೀಸು ನೀಡಿ, ವಿಶೇಷ ಮಹಾ ಸಭೆಯನ್ನು ಯಂ. ಜಯಾನಂದ ದೇವಾಡಿಗ ಮಾರ್ಗದರ್ಶನದಲ್ಲಿ ತಾ. 22-06-2014ರಂದು ಮಂಗಳೂರು ಕುದ್ರೋಳಿಯ ಸಲಫಿ ಮಸೀದಿಯಲ್ಲಿ ಜರಗಿಸಿದೆ. 254 ಮಂದಿ ಸದಸ್ಯರು ವಿಶೇಷ ಮಹಾಸಭೆಯಲ್ಲಿ, ಹನ್ನೊಂದು ಮಂದಿ ಸದಸ್ಯರಿಗೆ ಪರಿಶೀಲನೆಗೆ ವಿಶೇಷ ಅವಕಾಶ ಕಲ್ಪಿಸಿಕೊಟ್ಟು, ಜ್ಞಾಪಕ ಪತ್ರ ಮತ್ತು ಕ್ರಮ ಮತ್ತು ನಿಬಂಧನೆಗಳನ್ನು ಮಂಡಿಸಿ, ಚರ್ಚಿಸಿ, ಪರಿಶೀಲಿಸಿ, ಸದಸ್ಯರ ಸಲಹೆ ಸೂಚನೆಗಳನ್ನು ಗಣನೆಗೆ ತೆಗೆದುಕೊಂಡು ಸರ್ವಾನುಮತದಿಂದ ಸ್ವೀಕರಿಸಿದೆ. ಕೇಂದ್ರ ಸಮಿತಿಯ ಅವಧಿಯನ್ನು ಕೂಡಾ ಸಭೆಯು 31-03-2015ರ ವರೆಗೆ ವಿಸ್ತರಿಸಿ ಹೊಸತಾಗಿ ಸ್ವೀಕರಿಸಿರುವ ಜ್ಞಾಪಕ ಪತ್ರ ಮತ್ತು ಕ್ರಮ ನಿಬಂಧನೆಗಳನ್ನು ಸದಸ್ಯರಿಂದ ಬಂದಿರುವ ಸಲಹೆ ಸೂಚನೆಗಳನ್ನು ಅಳವಡಿಸಿ ಕೊಂಡು, ಎರಡನೇ ವಿಶೇಷ ಮಹಾ ಸಭೆಯನ್ನು ರಮದಾನ್‌ನ ಬಳಿಕ ಅಂದರೆ ದಿನಾಂಕ 10-08-2014ರಂದು ಎರಡನೇ ವಿಶೇಷ ಮಹಾಸಭೆ ನಡೆಸಿ ಎರಡನೇ ಬಾರಿ ಮಂಜೂರಾತಿ ಪಡೆಯಲು ನಿರ್ಧರಿಸಿತ್ತು.

ದಿನಾಂಕ 16-03-2014ರಂದು ನೋಟೀಸು ನೀಡಿ, ದಿನಾಂಗ 10-08-2014ರಂದು 207 ಮಂದಿ ಸದಸ್ಯರ ಹಾಜರಾತಿಯಲ್ಲಿ ಎರಡನೇ ವಿಶೇಷ ಮಹಾಸಭೆ ನಡೆಸಿ ಸಮಗ್ರವಾಗಿ ತಿದ್ದುಪಡಿಗೊಳಿಸಿ ಹೊಸತಾಗಿ ರಚಿಸಿ ತಾ. 22-06-2014ರಂದು ವಿಶೇಷ ಮಹಾಸಭೆಯಲ್ಲಿ ಸರ್ವಾನುಮತದಿಂದ ಮಂಜೂರಾಗಿರುವ ಜ್ಞಾಪಕ ಪತ್ರ, ಕ್ರಮ ಮತ್ತು ನಿಬಂಧನೆಗಳನ್ನು ಕೂಲಂಕುಷವಾಗಿ ಪುನರ್ ಪರಿಶೀಲಿಸಿ, ಸರ್ವಾನುಮತದಿಂದ ಎರಡನೇ ಬಾರಿ ಮಂಜೂರು ಮಾಡಲಾಗಿದೆ.

ಹೊಸತಾಗಿ ರಚಿಸಿ, ಎರಡು ವಿಶೇಷ ಮಹಾ ಸಭೆಗಳಲ್ಲಿ ಆಜ್ಞಾನುಸಾರದಿಂದ ಮಂಜೂರಾಗಿರುವ ಕ್ರಮ ಮತ್ತು ನಿಬಂಧನೆಗಳಂತೆ ಈಗಿರುವ ಘಟಕಗಳನ್ನು ಹೊಸತಾಗಿ ರಚಿಸಲ್ಪಡುವ ತಾಲೂಕು ಸಮಿತಿಗಳಲ್ಲಿ ವಿಲೀನಗೊಳಿಸಲಾಗುವುದು.

ಸಂಸ್ಥೆಯ ಅಧೀನದ ಮಸೀದಿಗಳಿಗೆ ಕೇಂದ್ರ ಸಮಿತಿಯ ಅಧ್ಯಕ್ಷರು ಮುತುವಲ್ಲಿಯಾಗಿರುವ ನೆಲೆಯಲ್ಲಿ ನೇಮಿಸುವ ಖಾದಿಮ್ ಮತ್ತು ಮಸೀದಿ ಕ್ಷೇತ್ರದ ಸಂಸ್ಥೆಯ ಸದಸ್ಯರಲ್ಲಿ ಆರಿಸಲ್ಪಡುವ 10 ಮಂದಿ ಸದಸ್ಯರಲ್ಲಿ ಓರ್ವ ಉಪ ಖಾದಿಮ್, ಓರ್ವ ಕಾರ್ಯದರ್ಶಿ, ಓರ್ವ ಉಪ ಕಾರ್ಯದರ್ಶಿ ಮತ್ತು ಓರ್ವ ಲೆಕ್ಕ ಪತ್ರ ನಿರ್ವಹಕನಾಗಿ ಆರಿಸಿ ಖಾದಿಮ್‌ರವರ ಹಿರಿತನದಲ್ಲಿ ಮಸೀದಿ ಮದರಸ ಮ್ಯಾನೇಜಿಂಗ್ ಕಮಿಟಿಯನ್ನು ಆರಿಸಿ ಮಸೀದಿ ಮದರಸಗಳ ಆಡಳಿತವನ್ನು ನಡೆಸಲಾಗುವುದು.

ನಗರಸಭೆ, ಮಹಾನಗರ ಪಾಲಿಕೆ ಮತ್ತು ಅವುಗಳನ್ನು ಹೊರತು ಪಡಿಸಿದ ಕಂದಾಯ ತಾಲೂಕು ಕ್ಷೇತ್ರಗಳಲ್ಲಿರುವ ಸಂಸ್ಥೆಯ ಸದಸ್ಯರಾಗಿರುವವರು ಸೇರಿ ವರ್ಷಕ್ಕೊಮ್ಮೆ ನಗರ ಸಭಾ ತಾಲೂಕು ಸಮಿತಿ, ಮಹಾನಗರ ಪಾಲಿಕಾ ತಾಲೂಕು ಸಮಿತಿ, ಕಂದಾಯ ತಾಲೂಕು ಸಮಿತಿಗಳನ್ನು ರಚಿಸಿ, ಆಯಾಯ ತಾಲೂಕು ಕ್ಷೇತ್ರದ ಮಸೀದಿ-ಮದರಸ ಮ್ಯಾನೇಜಿಂಗ್ ಕಮಿಟಿಯವರು ಸೇರಿದಂತೆ ತಾಲೂಕು ಸಮಿತಿಗಳನ್ನು ರಚಿಸಿ ಸಮಾಜ ಬಾಂಧವರ ಹಿತ ಸಾಧನೆಗಾಗಿ ಸಂಸ್ಥೆಯು ಕೆಲಸ ಕಾರ್ಯಗಳನ್ನು ನಿರ್ವಹಿಸುವರೆ ವ್ಯವಸ್ಥೆ ಮಾಡಲಾಗಿದೆ.

ಸಂಘದ ಎಲ್ಲಾ ಸದಸ್ಯರು ಒಂದೆಡೆ ಸಭೆ ಸೇರಿ ಸಂಸ್ಥೆಯ ಆಡಳಿತವನ್ನು ನಿರ್ವಹಿಸುವರೆ 3 ವರ್ಷಗಳಿಗೊಮ್ಮೆ ಕೇಂದ್ರ ಸಮಿತಿಯನ್ನು ಆರಿಸುವ ವ್ಯವಸ್ಥೆಯನ್ನು ಸಂಸ್ಥೆಯು ಹೊಂದಿದೆ. ಒಟ್ಟಿನಲ್ಲಿ ಸೌತ್ ಕರ್ನಾಟಕ ಸಲಫಿ ಮೂವ್‌ಮೆಂಟ್(ರಿ.), ಮಂಗಳೂರು (ಎಸ್.ಕೆ.ಎಸ್.ಎಂ.) ಪುನಶ್ಚೇತನಗೊಂಡು ಮುಸ್ಲಿಮ್ ಬಾಂಧವರ ಮುಖ್ಯವಾಗಿ ಸಲಫಿ ಬಾಂಧವರ ಸರ್ವತೋಮುಖವಾದ ಹಿತ ಸಾಧನೆಗೆ ಹೊಸ ಹುರುಪಿನಿಂದ ಶ್ರಮಿಸಲು ಸಿದ್ಧಗೊಂಡಿದೆ.

ಸಂಸ್ಥೆಯಲ್ಲಿ 410 ಮಂದಿ ಸಲಫಿ ಬಾಂಧವರು ಸದಸ್ಯರಾಗಿ ಸಹಕರಿಸುತ್ತಿದ್ದಾರೆ. ಸಂಸ್ಥೆಯ ಸದಸ್ಯತನ ಹೊಂದುವರೆ ಬಹಳಷ್ಟು ಮಂದಿ ಆಸಕ್ತಿ ತೋರಿಸುತ್ತಿದ್ದು, ಹೊಸ ಜ್ಞಾಪಕ ಪತ್ರ, ಕ್ರಮ ಮತ್ತು ನಿಬಂಧನೆಯು ಅನುಷ್ಠಾನಕ್ಕೆ ಬಂದೊಡನೆ ಹೊಸ ಸದಸ್ಯರನ್ನು ಸೇರಿಸಿಕೊಳ್ಳಲು ನಿರ್ಣಯಿಸಿದೆ.

ಎರಡು ವಿಶೇಷ ಮಹಾಸಭೆಗಳ ಅಧ್ಯಕ್ಷತೆಯನ್ನು ಸಂಸ್ಥೆಯ ಅಧ್ಯಕ್ಷರಾದ ಜನಾಬ್ ಅಹ್ಮದ್ ಅನ್ವಾರ್‌ರವರು ವಹಿಸಿ ವಿಶೇಷ ಮಹಾಸಭೆಗಳನ್ನು ನಡೆಸಿಕೊಟ್ಟಿರುತ್ತಾರೆ. ಪ್ರಧಾನ ಕಾರ್ಯದರ್ಶಿ ಜನಾಬ್ ಬಶೀರ್ ಅಹ್ಮದ್‌ರವರು ವಿಷಯಗಳನ್ನು ಮಂಡಿಸಿರುತ್ತಾರೆ. ಜನಾಬ್ ಇಸ್ಮಾಯೀಲ್ ಶಾಫಿ, ಜನಾಬ್ ಗುಲಾಮ್ ಮುಹಮ್ಮದ್, ಜನಾಬ್ ಕೆ.ಎಂ. ಹನೀಫ್ ಹಾಗೂ ಸಂಸ್ಥೆಯ ವ್ಯವಸ್ಥಾಪಕ ಜನಾಬ್ ಮುಹಮ್ಮದ್ ಶಬೀರ್‌ರವರು ಸಹಕರಿಸಿರುತ್ತಾರೆ. ಹಿರಿಯರಾದ ಯಂ. ಜಯಾನಂದ ದೇವಾಡಿಗರು ಎರಡೂ ವಿಶೇಷ ಮಹಾ ಸಭೆಗಳಲ್ಲಿ ಉಪಸ್ಥಿತರಿದ್ದು ಮಾರ್ಗದರ್ಶನ ನೀಡಿರುತ್ತಾರೆ.

ಸಮಾಜ ಬಾಂಧವರ ಹಿತಸಾಧನೆ ಮತ್ತು ಸಂಘಟನೆಯ ಕೆಲಸ ಕಾರ್ಯಗಳಿಗೆ ಎಸ್.ಕೆ.ಎಸ್.ಎಂ. ನಡೆಸುವ ಪ್ರಯತ್ನವನ್ನು ಎಲ್ಲರೂ ಬೆಂಬಲಿಸಬೇಕಾಗಿ ವಿಂತಿಸಿಕೊಳ್ಳಲಾಗಿದೆ.

**ಪ್ರಧಾನ ಕಾರ್ಯದರ್ಶಿ**

# ಇಸ್ಮಾಯೀಲ್ ಶಾಫಿಯುವರ ‘ಘಾತಿಹಾದ ತೀರದಲ್ಲಿ’ ಕೃತಿ ಬಿಡುಗಡೆ




ಮಂಗಳೂರು: ಇಸ್ಲಾಮೀ ಸಾಹಿತ್ಯ ಲೋಕಕ್ಕೆ ಹಲವಾರು ಉತ್ಕೃಷ್ಟ ಕೃತಿಗಳನ್ನು ಕೊಡುಗೆಯಿತ್ತ ವಿಶ್ವಪ್ರಸಿದ್ಧ ಇಸ್ಲಾಮೀ ದಾರ್ಶನಿಕ, ಗ್ರಂಥಕರ್ತ ದಿ| ಉಮರ್ ಮೌಲವಿಯವರ ಮಲಯಾಳಿ ಕೃತಿಯನ್ನಾಧರಿಸಿ ಲೇಖಕ ಇಸ್ಮಾಯೀಲ್ ಶಾಫಿಯವರು ಬರೆದ "ಘಾತಿಹಾದ ತೀರದಲ್ಲಿ" ಎಂಬ ಪುಸ್ತಕವನ್ನು ಕೇರಳ ನದ್ವತ್ತುಲ್ ಮುಜಾಹಿದೀನ್‌ನ ರಾಜ್ಯ ಕಾರ್ಯದರ್ಶಿ ಮೌಲವಿ ಅಬ್ದುಲ್ ರಹಿಮಾನ್ ಸಲಫಿಯವರು ಬಿಡುಗಡೆಗೊಳಿಸಿದರು. ಪುಸ್ತಕವನ್ನು ಪ್ರಕಟಿಸಿದ ಕರ್ನಾಟಕ ಸಲಫಿ ಎಸೋಸಿಯೇಶನ್ ರಿಯಾದ್ ಇದರ ಅಧ್ಯಕ್ಷರಾದ ಮೂಸಾ ತಲಪಾಡಿಯವರ ಅಧ್ಯಕ್ಷತೆಯಲ್ಲಿ ನಡೆದ ಬಿಡುಗಡೆ ಸಮಾರಂಭದಲ್ಲಿ ಸೌತ್ ಕರ್ನಾಟಕ ಸಲಫಿ ಮೂವ್‌ಮೆಂಟ್‌ನ ಪ್ರಧಾನ ಕಾರ್ಯದರ್ಶಿ ಬಶೀರ್ ಅಹ್ಮದ್ ಶಾಲಿಮಾರ್, ಉಪಾಧ್ಯಕ್ಷ ಅಬೂಬಕರ್ ಪಾಂಡೇಶ್ವರ, ಸತ್ಯ ಪ್ರಕಾಶನ ಸಂಸ್ಥೆಯ ಅಧ್ಯಕ್ಷ ಯು.ಎನ್. ಅಬ್ದುಲ್ ರಝಾಕ್ ಮುಂತಾದವರು ಮುಖ್ಯ ಅತಿಥಿಗಳಾಗಿದ್ದರು.

ಪವಿತ್ರ ಸಂದೇಶ ಪತ್ರಿಕೆಯ ಸಂಪಾದಕ ಎಂ.ಜಿ. ಮುಹಮ್ಮದ್ ಪ್ರಾರಂಭದಲ್ಲಿ ಸ್ವಾಗತಿಸಿ, ಕೊನೆಯಲ್ಲಿ ಕೆ.ಎಂ. ಹನೀಫ್ ಧನ್ಯವಾದವಿತ್ತರು.

# ಸಾರ್ವಜನಿಕ ಹಿತಾಸಕ್ತಿಯ ಪ್ರಕಟಣೆ

# ಜಾತಿ ಜನಗಣತಿ ಸಮೀಕ್ಷೆಯಲ್ಲಿ ಸಹಕರಿಸಿರಿ

ಕರ್ನಾಟಕ ಸರಕಾರವು ರಾಜ್ಯದ ಎಲ್ಲಾ 1,216 ಜಾತಿಗಳ ಜನಗಣತಿ, ಸಾಮಾಜಿಕ, ಶೈಕ್ಷಣಿಕ, ಔದ್ಯೋಗಿಕ, ಆರ್ಥಿಕ ಮತ್ತು ರಾಜಕೀಯ ಪ್ರಾತಿನಿಧ್ಯದ ಕುರಿತು, ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಮುಖೇನ ಸಮೀಕ್ಷೆ ನಡೆಸಲು ಮುಂದಾಗಿದೆ.

ಈ ರೀತಿಯ ಸಮೀಕ್ಷೆ ಪ್ರಜಾಪ್ರಭುತ್ವ ಭಾರತದಲ್ಲಿ ಮೊತ್ತ ಮೊದಲಾಗಿ ನಡೆಯುತ್ತಿದೆ. ಅದು ಕೂಡಾ ಕರ್ನಾಟಕ ರಾಜ್ಯದಲ್ಲಿ ಜಾತಿಗಳ ಜನಗಣತಿ ನಡೆಸಬೇಕೆಂಬುದು ಹಿಂದುಳಿದ ವರ್ಗಗಳವರ ಬಹು ಕಾಲದ ಬೇಡಿಕೆಯಾಗಿದೆ. ರಾಜ್ಯದ ಗೌರವಾನ್ವಿತ ಮುಖ್ಯ ಮಂತ್ರಿಯವರಿಗೆ ಧನ್ಯವಾದಗಳು.

ಈ ಜನಗಣತಿ ಸಮೀಕ್ಷೆಯು - ಎಲ್ಲಾ ಜಾತಿ, ಮತ, ಧರ್ಮಗಳವರ ಹಿತಸಾಧನೆಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಹಿತರಕ್ಷಣೆಯಲ್ಲಿ ಸರಕಾರವು ವ್ಯವಸ್ಥಿತ ರೀತಿಯಲ್ಲಿಕೆಲಸ ಮಾಡಲು ಅನುವು ಮಾಡಿಕೊಡುತ್ತದೆ. ತತ್ಪರಿಣಾಮವಾಗಿ ರಾಜ್ಯವು ಪ್ರಗತಿ ಸಾಧಿಸಲು, ರಾಜ್ಯದ ಜನರ ಜೀವನ ಮಟ್ಟವು ಉತ್ತಮಗೊಳ್ಳಲು, ರಾಜ್ಯದಲ್ಲಿ ಶಾಂತಿ, ಸೌಹಾರ್ದತೆ, ನೆಮ್ಮದಿ ವೃದ್ಧಿಗೊಳ್ಳಲು ಪೂರಕವಾಗುತ್ತದೆ.

ಈ ದಿಸೆಯಲ್ಲಿ ರಾಜ್ಯ ಸರಕಾರವು ಮುಂದಿನ ಒಂದೆರಡು ತಿಂಗಳುಗಳಲ್ಲಿ ಕಾರ್ಯಗತಗೊಳಿಸಲಿರುವ, ಈ ಜನಗಣತಿ ಸಮೀಕ್ಷಾ ಕಾರ್ಯಕ್ರಮವನ್ನು ಅತ್ಯಂತ ಯಶಸ್ವಿಗೊಳಿಸಲು ನಾಗರಿಕರೆಲ್ಲರೂ ಕೈಜೋಡಿಸಬೇಕಾಗಿದೆ. ಎಲ್ಲಾ ಜಾತಿಗಳವರ ಹಿತ ಸಾಧನೆಯಲ್ಲಿ ನೆರವಾಗುವುದರೊಂದಿಗೆ ತಮ್ಮ ಹಿತವನ್ನು ರಕ್ಷಿಸಿಕೊಳ್ಳಬೇಕಾಗಿದೆ. ತಮ್ಮ ಕುಟುಂಬ ಮಾಹಿತಿಯನ್ನು ಮೊದಲೇ ತಯಾರಿಸಿಟ್ಟು ಗಣತಿದಾರರಿಗೆ ನೀಡಿ ಸಹಕರಿಸಬೇಕಾಗಿದೆ.

ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ತನ್ನ ವೆಬ್‌ಸೈಟ್ (www.backwardclasses.kar.nic.in)ನಲ್ಲಿ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ - ಸಾಮಾಜಿಕ ಮತ್ತು ಶೈಕ್ಷಣಿಕ ಸಮೀಕ್ಷೆ - 2014ರ ಕುರಿತು ವಿವರವಾಗಿ ಪ್ರಕಟಿಸಿದೆ. ಸಮೀಕ್ಷೆಯಲ್ಲಿ ಆಯೋಗವು 54 ವಿಷಯಗಳ ಮಾಹಿತಿ ಸಂಗ್ರಹಿಸಿ ದಾಖಲಿಸಿಕೊಳ್ಳುವುದು. ಅದಕ್ಕಾಗಿ ಗಣತಿದಾರರು ಎಲ್ಲಾ ಮನೆಗಳನ್ನು ಸಂಪರ್ಕಿಸಲಿದ್ದಾರೆ. ಗಣತಿದಾರರು ಮಾಹಿತಿ ಸಂಗ್ರಹಕ್ಕಾಗಿ ಮನೆಗಳಿಗೆ ಬರುವಾಗ ಮಾಹಿತಿ ನೀಡಲು ತೊಂದರೆ, ಗಲಿಬಿಲಿ ಆಗದೆ ಸರಿಯಾದ ಮಾಹಿತಿ ನೀಡಲು ಸುಲಭವಾಗುವಂತೆ, ಮಾಹಿತಿ ನೀಡಬೇಕಾಗಿರುವ 54 ವಿಷಯಗಳನ್ನು ಇಲ್ಲಿ ಕೊಡಲಾಗಿದೆ.

**ಭಾಗ I**: ಜಿಲ್ಲೆಯ ಹೆಸರು, ತಾಲೂಕಿನ ಹೆಸರು, ಗ್ರಾಮ/ಪಟ್ಟಣದ ಹೆಸರು, ಬ್ಲಾಕ್ ಸಂಖ್ಯೆ, ಜಿಲ್ಲೆಯ ಸಂಕೇತ ಸಂಖ್ಯೆ, ತಾಲೂಕು ಸಂಕೇತ ಸಂಖ್ಯೆ, ಜನಗಣತಿ ಸಂಕೇತ ಸಂಖ್ಯೆ, ವಾರ್ಡು ಸಂಖ್ಯೆ, ಬಡಾವಣೆ/ಕೇರಿ/ಕಾಲನಿ ಹೆಸರು, ಚಾರ್ಜ್ ಸಂಖ್ಯೆ, ಮಜರೆ ಗ್ರಾಮದ ಹೆಸರು, ಮನೆ ಸಂಖ್ಯೆ.

**ಭಾಗ II**: ಕುಟುಂಬದ ಮುಖ್ಯಸ್ಥರು ಮತ್ತು ಸದಸ್ಯರ ವೈಯಕ್ತಿಕ ವಿವರಗಳು - ಸಾಮಾನ್ಯ: ವಿಷಯಗಳು 1. ಕ್ರಮ ಸಂಖ್ಯೆ, 2. ಕುಟುಂಬದ ಮುಖ್ಯಸ್ಥರ ಮತ್ತು ಸದಸ್ಯರ ಹೆಸರು 3. ಕುಟುಂಬದ ಮುಖ್ಯಸ್ಥರೊಂದಿಗೆ ಸಂಬಂಧ 4. ಲಿಂಗ 5. ಆಧಾರ್ ಕಾರ್ಡ್ ಸಂಖ್ಯೆ 6. ಧರ್ಮ 7. ಜಾತಿ 8. ಉಪಜಾತಿ 9. ಮತಾಂತರಗೊಡಿದ್ದೀರಾ 10. ಪೂರ್ಣಗೊಂಡ ವಯಸ್ಸು 11. ಮಾತೃಭಾಷೆ 12. ಅಂಗ ವಿಕಲರಾಗಿದ್ದರೆ ಸರ್ಕಾರದಿಂದ ನೀಡಲಾದ ಗುರುತಿನ ಚೀಟಿಯ ಸಂಖ್ಯೆ 13. ವೈವಾಹಿಕ ಸ್ಥಾನಮಾನ 14. ವಿವಾಹದ ಸಮಯದಲ್ಲಿ ವಯಸ್ಸು.

**ಭಾಗ III**: ಶೈಕ್ಷಣಿಕ ವಿವರಗಳು, 15. ಶಾಲೆಗೆ ಸೇರಿದ ಸಮಯದಲ್ಲಿ ವಯಸ್ಸು, 16. ವಿದ್ಯಾಭ್ಯಾಸದ ವಿವರ, ಶಾಲೆ ಬಿಟ್ಟಿದ್ದರೆ ವಿವರಗಳು (6ರಿಂದ 16 ವರ್ಷದವರಿಗೆ ಮಾತ್ರ), 17. ಶಾಲೆ ಬಿಟ್ಟಾಗಿನ ತರಗತಿ, 18. ಶಾಲೆ ಬಿಟ್ಟಾಗಿನ ವಯಸ್ಸು, 19. ಶಾಲೆ ಬಿಡಲು ಕಾರಣ, 20. ಅನಕ್ಷರಸ್ಥರಾಗಿದ್ದರೆ ಕಾರಣ, 21. 17ರಿಂದ 40 ವರ್ಷದವರು - ಶಿಕ್ಷಣ ಮಂದುವರಿಸದಿರಲು ಕಾರಣ.

**ಉದ್ಯೋಗ**: ಸರ್ಕಾರಿ ಸೇವೆ/ಉದ್ಯೋಗ (ಮಾಸಿಕ ವೇತನದ ಮೇಲೆ) 22. ಸರ್ಕಾರಿ/ಖಾಸಗಿ, 23. ದರ್ಜೆ, 24. ಬಾಲ ಕಾರ್ಮಿಕರು, 25. ದಿನ ಕೂಲಿ, 26. ವ್ಯಾಪಾರ ವಿವರಗಳು, 27. ಹಾಲಿ ವೃತ್ತಿ/ಕಸುಬು, 28. ವಂಶ ಪಾರಂಪರ್ಯ ವೃತ್ತಿ/ಕಸುಬು.

**ಭಾಗ IV**: ಆರ್ಥಿಕ ಮತ್ತು ರಾಜಕೀಯ ಪ್ರಾತಿನಿಧ್ಯ: ವಲಸೆ - 29. ಇತರ ರಾಜ್ಯದಿಂದ ವಲಸೆ ಬಂದಿದ್ದರೆ ಆ ರಾಜ್ಯದ ಸಂಕೇತ ಸಂಖ್ಯೆ, 30. ವಲಸೆಗೆ ಕಾರಣ. ಕರ್ನಾಟಕದೊಳಗೆ ವಲಸೆ (ಜಿಲ್ಲೆಯಿಂದ ಜಿಲ್ಲೆಗೆ), 31. ಎಲ್ಲಿಂದ, 32. ಕಾರಣ, 33. ಆದಾಯ ತೆರಿಗೆ ಪಾವತಿದಾರರೇ (ಹೌದು/ಅಲ್ಲ) ಕುಟುಂಬವು ಹೊಂದಿರುವ ಒಟ್ಟು ಜಮೀನು, 34. ಜಮೀನಿನ ವಿಧ-ವಿಸ್ತೀರ್ಣ, 35. ಎಕರೆ, 36. ಗುಂಟೆ, 37. ಸೆಂಟ್ಸ್, 38. ನೀರಾವರಿ ಮೂಲ, 39. ಪ್ರಮುಖ ಬೆಳೆ, ಉತ್ಪನ್ನಗಳು, 40. ಇತರ ಕೃಷಿ ಚಟುವಟಿಕೆಗಳು, ಕುಟುಂಬದ ಸಾಲ, 41. ಉದ್ದೇಶ, 42. ಮೂಲ. ರಾಜಕೀಯ ಪ್ರಾತಿನಿಧ್ಯ, 43. ಜನ ಪ್ರತಿನಿಧಿಗಳಾಗಿದ್ದಲ್ಲಿ ವಿವರಗಳು, 44. ಸಹಕಾರಿ/ಸರ್ಕಾರೇತರ ಸಂಘ ಸಂಸ್ಥೆಗಳಲ್ಲಿ ಪದಾಧಿಕಾರಿಗಳಾಗಿದ್ದಲ್ಲಿ ವಿವರಗಳು.

**ಭಾಗ V**: ಸಾಮಾಜಿಕ: 45. ವಾಸ್ತವ್ಯ ಪರಿಸರ, 46. ಹಾಲಿ ವಾಸವಿರುವ ಮನೆ, 47. ಶೌಚಾಲಯದ ವ್ಯವಸ್ಥೆ, 48. ಯಾವ ತರದ ಮನೆ, 49. ಕುಡಿಯುವ ನೀರಿನ ಮೂಲ, 50. ದೀಪದ ಮೂಲ, 51. ಅಡುಗೆಗೆ ಬಳಸಲಾಗುವ ಪ್ರಮುಖ ಇಂಧನ, 52. ಸ್ಥಿರ/ಚರಾಸ್ತಿ, 53. ಸರ್ಕಾರದಿಂದ ಪಡೆದ ಸವಲತ್ತುಗಳು, 54. ವೃತ್ತಿ ಸಂಬಂಧಿತ ಕಾಯಿಲೆ.

ಕುಟುಂಬ ಮುಖ್ಯಸ್ಥ/ಮಾಹಿತಿದಾರರ ಸಹಿ ಮತ್ತು ದಿನಾಂಕ ಗಣತಿದಾರರ ಸಹಿ ಮತ್ತು ದಿನಾಂಕ

**ಸೂಚನೆ**: ಕುಟುಂಬದ ಮುಖ್ಯಸ್ಥರೊಂದಿಗೆ ಸಂಬಂಧದಲ್ಲಿ - ತಂದೆ/ತಾಯಿ, ಗಂಡ/ಹೆಂಡತಿ, ಮಗ/ಮಗಳು, ಸಹೋದರ/ಸಹೋದರಿ, ಸೊಸೆ/ಅಳಿಯ, ಮಾವ/ಅತ್ತೆ, ಮೊಮ್ಮಕ್ಕಳು, ಭಾವ/ಅತ್ತಿಗೆ, ಚಿಕ್ಕಪ್ಪ/ದೊಡ್ಡಪ್ಪ, ಚಿಕ್ಕಮ್ಮ/ದೊಡ್ಡಮ್ಮ, ಅಜ್ಜ/ಅಜ್ಜಿ, ನಾದಿನಿ/ಮೈದುನ, ಸಂಬಂಧವಲ್ಲದ, ಇತರರು ಸೇರಿರುತ್ತಾರೆ. (ಸಂಕೇತ, ಬ್ಲಾಕ್ ಮತ್ತು ಚಾರ್ಜ್ ಸಂಖ್ಯೆಗಳನ್ನು ಗಣತಿದಾರರು ಬರೆಯಲಿರುವರು)

ಸಾರ್ವಜನಿಕ, ತಮ್ಮ ಕುಟುಂಬದ ಈ 54 ಮಾಹಿತಿಗಳನ್ನು ಮೊದಲೇ ಬರೆದಿಟ್ಟುಕೊಂಡು ಗಣತಿದಾರರು ತಮ್ಮ ಮನೆಗೆ ಬರುವಾಗ ಸರಿಯಾದ ಮಾಹಿತಿ ನೀಡಬೇಕು. ಒಂದು ವೇಳೆ ತಾವು ಮನೆಯಲ್ಲಿ ಇಲ್ಲದಿದ್ದರೂ ಮನೆ ಮಂದಿ ಸರಿಯಾದ ಮಾಹಿತಿಯನ್ನು ನೀಡಲು ಅವಕಾಶ ಮಾಡಿಕೊಡಬೇಕು. ಸಾರ್ವಜನಿಕರು ಇದನ್ನು ತೆಗೆದಿಟ್ಟುಕೊಳ್ಳಬೇಕು ಮತ್ತು ಇತರರಿಗೆ ಝೆರಾಕ್ಸ್ ಪ್ರತಿ ನೀಡಿ, ತಿಳಿಯಪಡಿಸ ಬೇಕೆಂದು ವಿನಮ್ರ ವಿನಂತಿ.

ಇದು ನಾಗರೀಕ ಕರ್ತವ್ಯ ನಿರ್ವಹಣೆಯ ನೆಲೆಯಲ್ಲಿ, ಸಾಮಾಜಿಕ ಕಳಕಳಿ, ಸಾರ್ವಜನಿಕ ಹಿತದೃಷ್ಟಿಯಿಂದ, ಶ್ರಮವಹಿಸಿ, ವೆಚ್ಚವನ್ನು ಹೊಂದಿಸಿಕೊಂಡು, ಪ್ರಕಟಿಸಿರುವ ಪ್ರಕಟಣೆ. ಇದನ್ನು ಸಾಮಾಜಿಕ ಕಾರ್ಯಕರ್ತರು, ಅನುದಾನಿತ, ಸರಕಾರಿ ಶಾಲೆಗಳ ಮುಖ್ಯ ಗುರುಗಳು, ಸಂಘ, ಸಂಸ್ಥೆಗಳು, ಮಂದಿರ, ಮಸೀದಿ ಮತ್ತು ಇಗರ್ಜಿ ಕಮಿಟಿಯವರು, ಧರ್ಮಗುರುಗಳು ಇವರಿಗೆ ಅಂಚೆಯಲ್ಲಿ ಕಳುಹಿಸಿ ಕೊಟ್ಟು, ಅವರ ಮುಖೇನ ಸಾರ್ವಜನಿಕರಿಗೆ ತಲುಪುವಂತೆ ಎಲ್ಲರೂ ಸಹಕರಿಸುವರೆಂಬ ವಿಶ್ವಾಸದಿಂದ ವ್ಯವಸ್ಥೆ ಮಾಡಿರುತ್ತೇನೆ.

ಈ ವಿಚಾರವನ್ನು, ಬಿಲ್ಲವ, ದೇವಾಡಿಗ, ಮೊಗವೀರ, ಮಡಿವಾಳ, ವಿಶ್ವಬ್ರಾಹ್ಮಣ, ಪದ್ಮಶಾಲಿ, ಕೊಟ್ಟಾರಿ, ಗಾಣಿಗ, ಪರಿಯಾಳ, ಬಲ್ಯಾಯ, ಚಾರೋಡಿ, ಚಪ್ಪೇಗಾರ್, ಕನ್ನಡ ಮೊಯಿಲಿ, ರಾಮಕ್ಷತ್ರಿಯ, ಕುಲಾಲ, ಗಟ್ಟಿ, ದೈವಜ್ಞ ಬ್ರಾಹ್ಮಣ, ಕುಮಾರ ಕ್ಷತ್ರಿಯ, ಸೋಮ ಕ್ಷತ್ರಿಯ, ಹೆಗಡೆ, ಬೋವಿ, ತೀಯಾ, ಸವಿತಾ, 24 ಮನೆ ತೆಲುಗು ಶೆಟ್ಟಿ, ಭಂಡಾರಿ, ದೇವಾಂಗ, ಜೋಗಿ ಮತ್ತು ಯಾದವ ಹೀಗೆ 28 ಜಾತಿಗಳ ರಿಜಿಸ್ಟರ್ಡ್ ಸಂಘಗಳ ಸದಸ್ಯತ್ವವನ್ನು ಮತ್ತು ಹಿಂದುಳಿದ ಜಾತಿಗಳ 342 ಮಹನೀಯರು, 176 ಮಹಿಳೆಯರು ಸೇರಿದಂತೆ 518 ಮಂದಿಯ ಸದಸ್ಯತ್ವವನ್ನು ಹೊಂದಿರುವ, "ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ಹಿಂದುಳಿದ ಜಾತಿಗಳ ಒಕ್ಕೂಟ, ಮಂಗಳೂರು (ರಿ.)" ಇವರಿಗಾಗಿ, ಒಕ್ಕೂಟದ ಪ್ರಧಾನ ಕಾರ್ಯದರ್ಶಿ ಶ್ರೀ ಯಂ. ಜಯಾನಂದ ದೇವಾಡಿಗರು ತಯಾರಿಸಿರುವ ಪುಸ್ತಕದಲ್ಲಿ ಪ್ರಕಟಿಸಲಾಗಿದೆ. ಈ ಪುಸ್ತಕವು ಸಂಘಗಳಲ್ಲಿ ಸಿಗುತ್ತದೆ.

ಇದೀಗ ಸಾರ್ವಜನಿಕರಿಗಾಗಿ, ತನ್ನ ಅಭಿಮಾನಿಗಳಿಂದ ವೆಚ್ಚವನ್ನು ಹೊಂದಿಸಿಕೊಂಡು, 1 ಲಕ್ಷ ಪ್ರತಿಗಳನ್ನು ಮುದ್ರಿಸಿ, ತಾನು ಕಾರ್ಯದರ್ಶಿ ಆಗಿರುವ, 207 ರಿಜಿಸ್ಟರ್ಡ್ ಸಂಘ, ಸಂಸ್ಥೆಗಳ ಸದಸ್ಯತ್ವವನ್ನು ಹೊಂದಿರುವ, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ನೋಂದಾಯಿತ ಸಂ, ಸಂಸ್ಥೆಗಳ ಒಕ್ಕೂಟ, ಮಂಗಳೂರು (ರಿ.) ಮತ್ತು ಸುಮಾರು 650 ಶಾಲೆಗಳಿರುವ ದ.ಕ. ಜಿಲ್ಲಾ (ಅವಿಭಜಿತ) ಅನುದಾನಿತ ಶಾಲೆಗಳ ಆಡಳಿತದವರ ಸಂಘ, ಮಂಗಳೂರು (ರಿ.) ಈ ಸಂಸ್ಥೆಗಳ ಕಾರ್ಯಕರ್ತರಿಗೆ, ಸದಸ್ಯರಿಗೆ, ಶಾಲೆಗಳಿಗೆ ಕೆಲವು ಪ್ರತಿಗಳನ್ನು ಅಂಚೆಯಲ್ಲಿ ಕಳುಹಿಸಿ, ಅವರೆಲ್ಲರೂ ಈ ಸಾರ್ವಜನಿಕ ಹಿತ ಸಾಧನೆಗೆ ನೆರವಾಗುವ ಕಾರ್ಯದಲ್ಲಿ ಸಹಭಾಗಿಗಳಾಗುವಂತೆ ಈ ಮೂಲಕ ಕೇಳಿಕೊಂಡು ಅವರ ಮುಖೇನ ಪ್ರತಿಗಳು ಸಾರ್ವಜನಿಕರಿಗೆ ತಲುಪುವಂತೆ ಅವರೆಲ್ಲರ ಸಹಕಾರ ದೊರೆಯುವುದೆಂಬ ಭರವಸೆಯಿಂದ ಈ ಪ್ರಕಟಣೆಯನ್ನು ಹೊರ ತಂದಿರುತ್ತೇನೆ. ಇದು ಒಂದು ಮನೆಗೆ ಒಂದು ಪ್ರತಿ - ಗಮನಿಸಿರಿ.

ಸಾಮಾಜಿಕ ಕಾರ್ಯಕರ್ತರು, ಸಂಘ-ಸಂಸ್ಥೆಗಳವರು, ಮಂದಿರ, ಮಸೀದಿ, ಚರ್ಚ್ ಕಮಿಟಿಯವರು, ಧರ್ಮಗುರುಗಳು, ಶಾಲೆಗಳ ಮುಖ್ಯ ಗುರುಗಳು, ಓದಿ ನೋಡಿ, ವಿಚಾರ ತಿಳಿದು, ತಮಗೆ ಕಳುಹಿಸಿರುವ ಪ್ರತಿಗಳಲ್ಲಿ ಒಂದನ್ನು ತಮಗಾಗಿ, ಉಳಿದುದನ್ನು ತಮ್ಮ ನೆರೆಕರೆಯವರಿಗೆ, ತಮ್ಮ ಬಂಧುಗಳಿಗೆ ಶಾಲಾ ಮಕ್ಕಳ ಹೆತ್ತವರಿಗೆ ನೀಡಿ, ಪ್ರತಿಗಳು ಕಡಿಮೆ ಬಿದ್ದರೆ, ಝೆರಾಕ್ಸ್ ಮಾಡಿಸಿ ನೀಡಿ, ತಿಳುವಳಿಕೆ ನೀಡುವ ಅಗತ್ಯವಿದ್ದವರಿಗೆ ತಿಳುವಳಿಕೆ ನೀಡಿ, ಎಲ್ಲರೂ ತಮ್ಮ ಕುಟುಂಬದ(ಮನೆಯ) 54 ಮಾಹಿತಿಗಳನ್ನು ಕಾಗದದಲ್ಲಿ ತಯಾರಿಸಿಟ್ಟುಕೊಂಡು, ಗಣತಿದಾರರು ಬಂದಾಗ ಸರಿಯಾದ ಮಾಹಿತಿಯನ್ನು ನೀಡುವಂತೆ ಸಹಕರಿಸಬೇಕಾಗಿ, ಪತ್ರಿಕಾ ವ್ಯವಸಾಯಿಗಳು ತಮ್ಮ ಪತ್ರಿಕೆಗಳಲ್ಲಿ ಇದನ್ನು ಪ್ರಕಟಿಸಿ, ಜನ ಜಾಗೃತಿಯಾಗುವಂತೆ ಸಹಕರಿಸಬೇಕಾಗಿ ವಿನಂತಿ.

**ಈ ಕೆಲಸವನ್ನು ಸರಿಯಾಗಿ ನಿರ್ವಹಿಸಿದಲ್ಲಿ ಸಾರ್ವಜನಿಕರಿಗೆ ಸೇವೆ ಸಲ್ಲಿಸಿದಂತಾಗುತ್ತದೆ ಮತ್ತು ಸರಕಾರದ ಕೆಲಸದಲ್ಲಿ ಕೈಜೋಡಿಸಿದಂತಾಗುತ್ತದೆ.**

**ಮೂಲ್ಕಿ ಜಯಾನಂದ ದೇವಾಡಿಗ,** ಪ್ರಧಾನ ಕಾರ್ಯದರ್ಶಿ, ದ.ಕ. ಮತ್ತು ಉಡುಪಿ ಜಿಲ್ಲೆಗಳ ಹಿಂದುಳಿದ ಜಾತಿಗಳ ಒಕ್ಕೂಟ, ಮಂಗಳೂರು (ರಿ.). ದಕ್ಷಿಣ ಕನ್ನದ ಮತ್ತು ಉಡುಪಿ ಜಿಲ್ಲೆಗಳ ನೋಂದಾಯಿತ ಸಂಘ, ಸಂಸ್ಥೆಗಳ ಒಕ್ಕೂಟ, ಮಂಗಳೂರು (ರಿ.). ಮೊ.: 9242750020

## - 3 ಆ ಇಮ್ರಾನ್

ಒಟ್ಟು ಸೂಕ್ತಗಳು: 200 | ಮುಹಮ್ಮದ್ ಅಮಾನಿ ಮೌಲವಿ | ಪ್ರಕಟಿತ ಸೂಕ್ತಗಳು: 57, 58, 59, 60, 61

57 وَاَمَّا الَّذِيْنَ اٰمَنُوْا وَعَمِلُوا الصّٰلِحٰتِ فَيُوَفِّيْهِمْ اُجُوْرَهُمْ ۗ وَاللّٰهُ لَا يُحِبُّ الظّٰلِمِيْنَ ٥٧ 58 ذٰلِكَ نَتْلُوْهُ عَلَيْكَ مِنَ الْاٰيٰتِ وَالذِّكْرِ الْحَكِيْمِ ٥٨

59 اِنَّ مَثَلَ عِيْسٰى عِنْدَ اللّٰهِ كَمَثَلِ اٰدَمَ ۗ خَلَقَهٗ مِنْ تُرَابٍ ثُمَّ قَالَ لَهٗ كُنْ فَيَكُوْنُ ٥٩ 60 اَلْحَقُّ مِنْ رَّبِّكَ فَلَا تَكُنْ مِّنَ الْمُمْتَرِيْنَ ٦٠

61 فَمَنْ حَاۤجَّكَ فِيْهِ مِنْۢ بَعْدِ مَا جَاۤءَكَ مِنَ الْعِلْمِ فَقُلْ تَعَالَوْا نَدْعُ اَبْنَاۤءَنَا وَاَبْنَاۤءَكُمْ وَنِسَاۤءَنَا وَنِسَاۤءَكُمْ وَاَنْفُسَنَا وَاَنْفُسَكُمْ ۗ ثُمَّ نَبْتَهِلْ فَنَجْعَلْ لَّعْنَتَ اللّٰهِ عَلَى الْكٰذِبِيْنَ ٦١

| | | | | | | |
|---|---|---|---|---|---|---|
| **57** | | | | | | |
| ಅವರಿಗೆ ಅವನು ನೆರವೇರಿಸಿ ಕೊಡುವನು فَيُوَفِّيْهِمْ | ಸತ್ಕರ್ಮಗಳನ್ನು الصّٰلِحٰتِ | ಮತ್ತು ಅವರು ಮಾಡಿದರು وَعَمِلُوا | ಅವರು ಸತ್ಯದಲ್ಲಿ ವಿಶ್ವಾಸವಿಟ್ಟರು اٰمَنُوْا | ಆದರೆ ಯಾರು وَاَمَّا الَّذِيْنَ | | |
| | ಅಕ್ರಮಿಗಳನ್ನು الظّٰلِمِيْنَ | ಅಲ್ಲಾಹು ಮೆಚ್ಚಲಾರನು وَاللّٰهُ لَا يُحِبُّ | ಅವರ ಪ್ರತಿಫಲಗಳನ್ನು اُجُوْرَهُمْ | | | |
| **58** | | | | | | |
| ವಿವೇಕಪೂರ್ಣವಾದ الْحَكِيْمِ | ಮತ್ತು ಉದ್ಬೋದನೆಯಾಗಿ وَالذِّكْرِ | ನಿದರ್ಶನಗಳಾಗಿ مِنَ الْاٰيٰتِ | ನಿಮಗೆ عَلَيْكَ | ಅದನ್ನು ನಾವು ಓದಿ ಕೊಡುತ್ತಿದ್ದೇವೆ نَتْلُوْهُ | ಅದು ذٰلِكَ | |
| **59** | | | | | | |
| ಅವರನ್ನು ಅವನು ಸೃಷ್ಟಿಸಿದನು خَلَقَهٗ | ಆದಮರ اٰدَمَ | ಉದಾಹರಣೆಯಂತಿದೆ كَمَثَلِ | ಅಲ್ಲಾಹನ ಬಳಿ عِنْدَ اللّٰهِ | ಈಸಾರ عِيْسٰى | ನಿಶ್ಚಯವಾಗಿಯೂ ಉದಾಹರಣೆಯು اِنَّ مَثَلَ | |
| | ಆಗ ಅದು ಉಂಟಾಗುತ್ತದೆ. فَيَكُوْنُ | ಆಗು كُنْ | ಅದರೊಡನೆ لَهٗ | ಬಳಿಕ ಅವನು ಹೇಳಿದನು ثُمَّ قَالَ | ಮಣ್ಣಿನಿಂದ مِنْ تُرَابٍ | |
| **60** | | | | | | |
| | ಸಂಶಯ ಪಡುವವರಲ್ಲಿ مِّنَ الْمُمْتَرِيْنَ | ಆದ್ದರಿಂದ ನೀವು ಆಗಬೇಡಿರಿ فَلَا تَكُنْ | ನಿಮ್ಮ ಪ್ರಭುವಿನ ವತಿಯದ್ದಾಗಿದೆ مِنْ رَّبِّكَ | ಸತ್ಯವು اَلْحَقُّ | | |
| **61** | | | | | | |
| ತಿಳುವಳಿಕೆ (ಜ್ಞಾನ) مِنَ الْعِلْمِ | ನಿಮಗೆ ಬಂದ مَا جَاۤءَكَ | ಮೇಲೂ مِنْۢ بَعْدِ | ಅದರಲ್ಲಿ (ಅವರಲ್ಲಿ) فِيْهِ | ನಿಮ್ಮೊಡನೆ ತರ್ಕಿಸುವುದಾದರೆ حَاۤجَّكَ | ಇನ್ನು ಯಾರಾದರೂ فَمَنْ | |
| ಮತ್ತು ನಿಮ್ಮ ಸ್ತ್ರೀಯರನ್ನು وَنِسَاۤءَكُمْ | ನಮ್ಮ ಸ್ತ್ರೀಯರನ್ನು وَنِسَاۤءَنَا | ಮತ್ತು ನಿಮ್ಮ ಪುತ್ರರನ್ನು وَاَبْنَاۤءَكُمْ | ನಮ್ಮ ಪುತ್ರರನ್ನು اَبْنَاۤءَنَا | ನಾವು ಕರೆಯೋಣ نَدْعُ | ಬನ್ನಿ تَعَالَوْا | ಆಗ ಹೇಳಿರಿ فَقُلْ |
| ಸುಳ್ಳು ಹೇಳುವವರ ಮೇಲೆ عَلَى الْكٰذِبِيْنَ | ಅಲ್ಲಾಹನ ಶಾಪವನ್ನು لَّعْنَتَ اللّٰهِ | ಹಾಗೆ ನಾವು ಮಾಡೋಣ فَنَجْعَلْ | ಆ ಮೇಲೆ ನಾವು ಮನಸಾರೆ ಪ್ರಾರ್ಥಿಸೋಣ ثُمَّ نَبْتَهِلْ | ಮತ್ತು ನಿಮ್ಮನ್ನು وَاَنْفُسَكُمْ | ನಮ್ಮನ್ನು وَاَنْفُسَنَا | |

57. ಆದರೆ ಯಾರು ಸತ್ಯವಿಶ್ವಾಸವಿಟ್ಟು ಸತ್ಕರ್ಮಗಳನ್ನು ಮಾಡಿದರೋ ಅವರಿಗೆ ಅವನು (ಅಲ್ಲಾಹು) ಅವರ ಪ್ರತಿಫಲಗಳನ್ನು ಪೂರ್ಣಗೊಳಿಸಿ ಕೊಡುವನು ಮತ್ತು ಅಲ್ಲಾಹು ಅಕ್ರಮಿಗಳನ್ನು ಪ್ರೀತಿಸಲಾರನು.

58. (ಪ್ರವಾದಿಯವರೇ) ಅವುಗಳನ್ನು (ಮೇಲೆ ವಿವರಿಸಲಾದವುಗಳನ್ನು) ನಾವು ನಿಮಗೆ ನಿದರ್ಶನಗಳಾಗಿ ಮತ್ತು ವಿವೇಕಪೂರ್ಣ ಉದ್ಬೋಧನೆಗಳಾಗಿ ಓದಿ ಕೇಳಿಸುತ್ತಿದ್ದೇವೆ.

59. ನಿಶ್ಚಯವಾಗಿಯೂ ಅಲ್ಲಾಹನ ಬಳಿ ಈಸಾರ ಉಪಮೆಯು ಆದಮರ ಉಪಮೆಯಂತಿದೆ. (ಅಂದರೆ) ಅವರನ್ನು (ಆದಮರನ್ನು) ಅವನು ಮಣ್ಣಿನಿಂದ ಸೃಷ್ಟಿಸಿದನು. ಅನಂತರ ಅದರೊಡನೆ 'ಆಗು' ಎಂದನು. ಆಗ ಅವರು ಉಂಟಾದರು.*

60. (ಇದು) ನಿಮ್ಮ ಪ್ರಭುವಿನ ವತಿಯ ಸತ್ಯವಾಗಿದೆ. ಆದುದರಿಂದ ನೀವು ಸಂದೇಹ ಪಡುವವರಲ್ಲಾಗಬೇಡಿರಿ.

61. ಇನ್ನು, ನಿಮಗೆ (ಈ ದಿವ್ಯ) ಜ್ಞಾನವು ಬಂದ ಮೇಲೆ ಅದರಲ್ಲಿ (ಈಸಾರ ವಿಷಯದಲ್ಲಿ) ನಿಮ್ಮೊಡನೆ ಯಾರಾದರೂ ತರ್ಕಿಸುವುದಾದರೆ, ನೀವು ಹೇಳಿರಿ: "ಬನ್ನಿ, ನಮ್ಮ ಪುತ್ರರನ್ನೂ ನಿಮ್ಮ ಪುತ್ರರನ್ನೂ ನಮ್ಮ ಸ್ತ್ರೀಯರನ್ನೂ ನಿಮ್ಮ ಸ್ತ್ರೀಯರನ್ನೂ ನಮ್ಮನ್ನೂ ನಿಮ್ಮನ್ನೂ ನಾವು ಕರೆಯೋಣ ಮತ್ತು ಸುಳ್ಳು ಹೇಳುವವರ ಮೇಲೆ ಅಲ್ಲಾಹನ ಶಾಪ ಉಂಟಾಗುವಂತೆ ಮನಸಾರೆ ಪ್ರಾರ್ಥಿಸೋಣ.

# ಇವೆಲ್ಲಾ ಯಾಕೆ ಪ್ರಮುಖ ಸುದ್ದಿ ಆಗುವುದಿಲ್ಲ?

ದೃಶ್ಯ ಮಾಧ್ಯಮ ಮತ್ತು ಇತರ ಸುದ್ದಿ ಮಾಧ್ಯಮಗಳು ಜನರಿಗೆ ಯಾವುದು ಹೇಳಬೇಕೋ ಅದನ್ನು ಹೇಳದೆ ಕೇವಲ ಭ್ರಮೆಗೆ ಒಳ ಪಡಿಸುತ್ತಿವೆ. ಇಲ್ಲಿ ವಿವರಿಸಲಾದ ಕೆಲವು ಸುದ್ದಿಗಳನ್ನು ನೀವು ಎಲ್ಲಿಯಾದರೂ ಕೇಳಿದ್ದೀರಾ?

ನೆಸ್ಲೇ ಕಂಪೆನಿಯು ಅವರ ಕಿಟ್‌ಕಾಟ್ ಮುಂತಾದ ಉತ್ಪನ್ನಗಳಿಗೆ ಬೀಫ್‌ನ ರಸವನ್ನು ಉಪಯೋಗಿಸುತ್ತಿದೆ! ಚೆನ್ನೈ ಹೈಕೋರ್ಟಿನ ಮುಂದೆ ಫೇರ್ ಅಂಡ್ ಲವ್ಲೀ ಕಂಪೆನಿಯು ತಮ್ಮ ಉತ್ಪಾದನೆಯಲ್ಲಿ ಹಂದಿಯ ಮಾಂಸದ ಕೊಬ್ಬು ಇದೆ ಎಂದು ಒಪ್ಪಿಕೊಂಡಿದೆ! ವಿಕ್ಸ್‌ನ್ನು ಯುರೋಪಿನಲ್ಲಿ ವಿಷ ಎಂದು ಪರಿಗಣಿಸಲಾಗಿದೆ. ನಮ್ಮಲ್ಲಿ ದಿನದ ಇಪ್ಪತ್ತನಾಲ್ಕು ಗಂಟೆಯೂ ಇದರ ಜಾಹೀರಾತು ಟಿವಿಯಲ್ಲಿ ಬರುತ್ತಿದೆ! ಲೈಫ್ ಬಾಯ್ ಎಂಬ ಸೋಪು ಅತ್ತ ಟಾಯ್ಲೆಟ್ ಸೋಪೂ ಅಲ್ಲ ಇತ್ತ ಸ್ನಾನದ ಸಾಬೂನೂ ಅಲ್ಲ. ಅದು ಪ್ರಾಣಿಗಳಿಗೆ ಸ್ನಾನಕ್ಕಾಗಿ ಸಾಬೂನು. ಯುರೋಪಿನಲ್ಲಿ ಅದನ್ನು ನಾಯಿಗಳಿಗೆ ಸ್ನಾನ ಮಾಡಲು ಉಪಯೋಗಿಸಿದರೆ ನಮ್ಮಲ್ಲಿ ಲಕ್ಷಾಂತರ ಮಂದಿ ಇದನ್ನು ಸ್ನಾನ ಮಾಡುವಾಗ ಬಳಸುತ್ತಾರೆ! ಕೋಕ್ ಮತ್ತು ಪೆಪ್ಸಿ ಟಾಯ್ಲೆಟ್ ಕ್ಲೀನರ್ ಆಗಿದೆ. ಇದರಲ್ಲಿ 21 ಬಗೆಯ ವಿಷವಸ್ತುಗಳು ಇವೆ. ಇದರ ಮಾರಾಟವನ್ನು ಭಾರತದ ಪಾರ್ಲಿಮೆಂಟಿನಲ್ಲಿ ನಿಷೇಧಿಸಲಾಗಿದೆ. ಆದರೆ ದೇಶಾದ್ಯಂತ ಇದನ್ನು ಮಾರಾಟ ಮಾಡಲಾಗುತ್ತಿದೆ! ಭಾರತದಲ್ಲಿ ಆರೋಗ್ಯ ಟಾನಿಕ್‌ನ ಹೆಸರಿನಲ್ಲಿ ಬೂಸ್ಟ್, ಕೋಂಪ್ಲಾನ್, ಹಾರ್ಲಿಕ್ಸ್, ಮಾಲ್ಟೋವಾ ಮುಂತಾದವುಗಳನ್ನು ಮಾರಲಾಗುತ್ತಿದೆ. ಆದರೆ ಭಾರತದ ದೆಹಲಿಯಲ್ಲಿರುವ ಅತೀ ದೊಡ್ಡ ಲ್ಯಾಬೊರೇಟರಿಯಲ್ಲಿ ಇದನ್ನು ಪರೀಕ್ಷಿಸಿದಾಗ ಅದರಲ್ಲಿ ನೆಲಗಡಲೆಯ ಹಿಂಡಿ ವ್ಯಾಪಕ ಪ್ರಮಾಣದಲ್ಲಿ ಪತ್ತೆಯಾಗಿದೆ. ನಿಜವಾಗಿ ಇದು ಪ್ರಾಣಿಗಳ ಆಹಾರ. ಆದರೆ ನಮ್ಮಲ್ಲಿ ಅದು ಆರೋಗ್ಯ ಟಾನಿಕ್!

ಅಮಿತಾಬ್ ಬಚ್ಚನ್‌ಗೆ ಹೊಟ್ಟೆಯ ಆಪರೇಷನ್ ಮಾಡಿದ ನಂತರ ವೈದ್ಯರು ಕೋಕ್, ಪೆಪ್ಸಿ ಕುಡಿಯುವುದನ್ನು ಬಿಡಬೇಕು ಎಂದು ಹೇಳಿದ್ದರು. ಅದರ ಮರುದಿನವೇ ಅಮಿತಾಬ್ ಅದನ್ನು ಕುಡಿಯುವುದು ಮಾತ್ರವಲ್ಲ, ಅದರ ಜಾಹೀರಾತಿನಲ್ಲಿ ನಟಿಸುವುದನ್ನೇ ಬಿಟ್ಟರು. ಅನಂತರ ಇಂದಿನ ವರೆಗೆ ಅದರ ಜಾಹೀರಾತಿನಲ್ಲಿ ಅಮಿತಾಬ್ ಕಾಣಿಸಿಕೊಂಡಿಲ್ಲ! ಜನರು ಮುಗಿಬಿದ್ದು ತಿನ್ನುವ ವಿದೇಶ ಬ್ರಾಂಡಿನ ಫಿಜ್ಜಾದಲ್ಲಿ ಹಂದಿ ಮಾಂಸದ ಅಂಶವನ್ನು ಸೇರಿಸಲಾಗುತ್ತದೆ. ಇದರ ಬಗ್ಗೆ ಗೂಗಲ್‌ನಲ್ಲಿ ವಿವರ ಇದೆ. ಸಿನಿಮಾ ನಟಿಯರ ಎದೆ, ತೊಡೆಗೆ ಚಿಕಿತ್ಸೆ ನೀಡಲಾಗುವ ಬಗ್ಗೆ ರಂಗುರಂಗಿನ ಪ್ರಚಾರ ಪಡೆಯುತ್ತಿರುವ ನಮ್ಮ ಮಹಾನ್ ದೇಶದಲ್ಲಿ ಈ ಮೇಲೆ ಹೇಳಿದ ಜನರಿಗೆ ಬೇಕಾದ ವಿಚಾರಗಳು ಎಂದಾದರೂ ಪ್ರಮುಖ ಸುದ್ದಿಯಾಗಿದೆಯೇ?

**ರವಿ ಕೆ. ಸುರತ್ಕಲ್**
**ಜಯಕಿರಣ ಪತ್ರಿಕೆ**

Name & Address:

**PAVITHRA SANDESHA**
*Kannada Fortnightly*
Polymer House, 2nd Floor, Nellikai Road, Mangalore - 575 001

Regd. With RNI No.: 63987/96
Postal Regd. No. KA/SK/MNG/160/2012-2014
Licence to Post without prepayment.
WPP/SK/MNG-104/2012-2014
Posted at Head Post Office, Mangalore.
Posting Date: 13th & 28th of Every Month
Publication Date: 10th & 25th of Every Month



# ವಾಟ್ಸಪ್ ಸಂದೇಶ ಕಾಲಂ

**ಅಲ್ಲಾಹನೊಂದಿಗೆ ಭರವಸೆ ಇಟ್ಟವರಿಗೆ ಅಲ್ಲಾಹನು ರಕ್ಷಿಸುತ್ತಾನೆ ಎಂಬುದಕ್ಕೆ ಸಾಕ್ಷಿ**



ಇಬ್ರಾಹೀಮ್(ಅ)ರವರನ್ನು ಬೆಂಕಿ ಸುಡಲಿಲ್ಲ.



ಇಸ್ಮಾಯೀಲ್(ಅ)ರವರ ಕೊರಳನ್ನು ಚಾಕು ಕೊಯ್ಯಲಿಲ್ಲ.



ಯೂನುಸ್(ಅ)ರವರು ಮೀನಿನ ಹೊಟ್ಟೆಯಲ್ಲಿ ಕರಗಲಿಲ್ಲ.



ಮೂಸಾ(ಅ)ರವರು ಸಮುದ್ರದಲ್ಲಿ ಮುಳುಗಲಿಲ್ಲ.



ಮುಹಮ್ಮದ್(ಸ)ರವರು ಗುಹೆಯಲ್ಲಿರುವಾಗ ಶತ್ರುಗಳ ಕಣ್ಣಿಗೆ ಕಾಣಲಿಲ್ಲ.

يَٰٓأَيُّهَا ٱلنَّبِىُّ حَسْبُكَ ٱللَّهُ وَمَنِ ٱتَّبَعَكَ مِنَ ٱلْمُؤْمِنِينَ

ಓ ಸಂದೇಶವಾಹಕರೇ, ನಿಮಗೂ ಸತ್ಯವಿಶ್ವಾಸಿಗಳ ಪೈಕಿ ನಿಮ್ಮನ್ನು ಅನುಸರಿಸಿದವರಿಗೂ ಅಲ್ಲಾಹನೇ ಸಾಕು.

(ಪವಿತ್ರ ಕುರ್‌ಆನ್ 8x64)

أَفَرَءَيْتُم مَّا تَحْرُثُونَ ءَأَنتُمْ تَزْرَعُونَهُۥٓ أَمْ نَحْنُ ٱلزَّٰرِعُونَ
لَوْ نَشَآءُ لَجَعَلْنَٰهُ حُطَٰمًا فَظَلْتُمْ تَفَكَّهُونَ
إِنَّا لَمُغْرَمُونَ بَلْ نَحْنُ مَحْرُومُونَ



ಹಾಗಿದ್ದರೆ ನೀವು ಬಿತ್ತುವ ಬೀಜ ವನ್ನು ನೀವು ನೋಡುವುದಿಲ್ಲವೇ? ಅದನ್ನು ಬೆಳೆಸುವವರು ನೀವೋ ಅಥವಾ (ಅದನ್ನು) ಬೆಳೆಸುವವರು ನಾವೋ? ನಾವಿಚ್ಛಿಸುತ್ತಿದ್ದರೆ ಅದನ್ನು ನಾವು (ಒಣಗಿದ) ಹೊಟ್ಟಾಗಿ ಮಾಡಿ ಬಿಡುತ್ತಿದ್ದೆವು. ಆಗ ನೀವು ಅಚ್ಚರಿಗೊಂಡು 'ನಿಜವಾಗಿಯೂ ನಾವು (ಕೃಷಿ ನಾಶಗೊಂಡು) ಸಾಲ ಬಾಧಿತರಾಗಿದ್ದೇವೆ. ಮಾತ್ರವಲ್ಲ, ನಾವು (ಜೀವನೋಪಾಯದ ಮಾರ್ಗ) ತಡೆಯಲ್ಪಟ್ಟವರಾಗಿದ್ದೇವೆ' ಎಂದು ಹೇಳುತ್ತಿದ್ದಿರಿ.

(ಪವಿತ್ರ ಕುರ್‌ಆನ್ 56x63, 64, 65, 66, 67)

وَلَقَدْ يَسَّرْنَا ٱلْقُرْءَانَ لِلذِّكْرِ فَهَلْ مِن مُّدَّكِرٍ

ಮತ್ತು ನಿಶ್ಚಯವಾಗಿಯೂ ನಾವು (ಈ) ಕುರ್‌ಆನನ್ನು ನೆನಪಿಸಲಿಕ್ಕಾಗಿ (ಉಪದೇಶಕ್ಕಾಗಿ) ಸುಲಭಗೊಳಿಸಿರುತ್ತೇವೆ. ಹಾಗಿರುವಾಗ ನೆನಪಿಸುವವರು (ಉಪದೇಶ ಫಲಿಸುವವರು) ಯಾರಾದರೂ ಇದ್ದಾರೆಯೇ? (ಪವಿತ್ರ ಕುರ್‌ಆನ್ 54x17+22+32+40)






فَبِمَا رَحْمَةٍ مِّنَ ٱللَّهِ لِنتَ لَهُمْ ۖ وَلَوْ كُنتَ فَظًّا غَلِيظَ ٱلْقَلْبِ لَٱنفَضُّوا۟ مِنْ حَوْلِكَ

(ಪ್ರವಾದಿಯವರೇ) ಅಲ್ಲಾಹನ ಕಡೆಯ ಒಂದು (ಮಹತ್ತರ) ಕೃಪೆಯಿಂದ ನೀವು ಅವರೊಂದಿಗೆ ಸೌಮ್ಯವಾಗಿದ್ದೀರಿ (ಸೌಮ್ಯವಾಗಿ ವರ್ತಿಸುತ್ತಿದ್ದೀರಿ). ಒಂದು ವೇಳೆ ನೀವು ಒರಟು ಸ್ವಭಾವಿಯೂ ಕಠಿಣ ಹೃದಯಿಯೂ ಆಗಿರುತ್ತಿದ್ದರೆ ನಿಮ್ಮ ಸುತ್ತುಮುತ್ತಲಿಂದ ಅವರು ಬೇರ್ಪಟ್ಟು ಹೋಗುತ್ತಿದ್ದರು.

(ಪವಿತ್ರ ಕುರ್‌ಆನ್ 3x159)



ಪ್ರವಾದಿ(ಸ) ಹೇಳಿದ್ದಾರೆ:

"ಅಲ್ಲಾಹು ಹೇಳಿದನು: ಓ ಆದಮನ ಮಗನೇ! ನೀನು ನನ್ನೊಂದಿಗೆ ಪ್ರಾರ್ಥಿಸುವಾಗಲೆಲ್ಲಾ ನಿನ್ನಲ್ಲಿ ಎಷ್ಟೇ ಪಾಪಗಳಿದ್ದರೂ ನಾನದನ್ನು ಕ್ಷಮಿಸುವೆನು. ಓ ಆದಮನ ಮಗನೇ! ನೀನು ಭೂಮಿ ತುಂಬಾ ಪಾಪಗಳೊಂದಿಗೆ ನನ್ನತ್ತ ಬರುವುದಾದರೆ ತರುವಾಯ ನನ್ನೊಂದಿಗೆ ಯಾರನ್ನೂ ಸಹಭಾಗಿಗಳಾಗಿ(ಶಿರ್ಕ್) ಮಾಡಿರದ ಸ್ಥಿತಿಯಲ್ಲಿ ನೀನು ನನ್ನನ್ನು ಭೇಟಿಯಾದರೆ ಭೂಮಿ ತುಂಬಾ ಪಾಪಮುಕ್ತಿಯೊಂದಿಗೆ ನಾನು ನಿನ್ನನ್ನು ಎದುರುಗೊಳ್ಳುವೆನು."

(ಸೋಹ್ ತಿರ್ಮಿದಿ)




Printed, Published & Owned by RIYAZ AHMED on behalf of SATHYA PRAKASHANA PUBLICATION TRUST MANGALORE, Printed at Digantha Mudrana Ltd., Yeyyadi, Mangalore, D.K. Published at 20-2-155/1, 2nd Floor, Polymer House Bldg., Nellikai Road, Mangalore - 575 001, D.K.. D.T.P.: Sowmya Graphics, Mangalore. Editor: M.G. Muhammad